


# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

*Monthly News Magazine*

Vol. - 13 | November 2015 | Issue No. 06 | ₹ 10/-




i Pranab Mukarji, His Excellency the President of India is seen along with Sri B.I. Nagarale, Chief National ommissioner, Bharat Scouts & Guides, India, Sri S. Sukumara, Director Bharat Scouts & Guides, India and other fficials when they met His Excellency at Rashtrapathi Bhavan, New Delhi on the occassion of Foundation Day nd Release of Flag Stickers on 7th November 2015.



Sri Siddaramaiah, Hon'ble Chief Minister of Karnataka, Dr. G. Parameshwar, Hon'ble Home Minister, Government of Karnataka releasing Flag Stickers on the occasion of Foundation Day of Bharat Scouts and Guides at Home Office Cauvery on 7th November 2015. Sri P.G.R. Sindhia, State Chief Commissioner, Sri Siddaiah, State Secretary, other Officials and Rovers & Rangers are seen.

ದಿನಾಂಕ 07.11.2015ರಂದು ಸಂಸ್ಥಾಪನಾ ದಿನಾಚರಣೆಯ ಪ್ರಯುಕ್ತ ಸನ್ಮಾನ್ಯ ಮಂತ್ರಿಗಳು ಹಾಗೂ ವಿವಿಧ ಇಲಾಖಾ ಮುಖ್ಯಸ್ಥರುಗಳು ಧ್ವಜ ಚೀಟಿಗಳನ್ನು ಬಿಡುಗಡೆ ಮಾಡಿದರು. ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು, ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಉಪಾಧ್ಯಕ್ಷರು ಮತ್ತು ರಾಜ್ಯ ಸಂಸ್ಥೆಯ ಪದಾಧಿಕಾರಿಗಳು ಉಪಸ್ಥಿತರಿದ್ದರು.



ಶ್ರೀ ಕೆ.ಜೆ. ಜಾರ್ಜ್, ಬೆಂಗಳೂರು ನಗರಾಭಿವೃದ್ಧಿ, ಜಲಮಂಡಳಿ
ಬಿಎಂಆರ್‌ಡಿಎ, ನಗರ ಯೋಜನೆ ಸಚಿವರು, ಕರ್ನಾಟಕ ಸರ್ಕಾರ



ಶ್ರೀ ಯು.ಟಿ.ಖಾದರ್, ಆರೋಗ್ಯ ಮತ್ತು ಕುಟುಂಬ ಕಲ್ಯಾಣ
ಇಲಾಖೆ ಸಚಿವರು, ಕರ್ನಾಟಕ ಸರ್ಕಾರ



ಶ್ರೀ ಕೌಶಿಕ್ ಮುಖರ್ಜಿ, ಭಾ.ಆ.ಸೇ, ಮುಖ್ಯ ಕಾರ್ಯದರ್ಶಿಗಳು,
ಕರ್ನಾಟಕ ಸರ್ಕಾರ



ಶ್ರೀ ಐ.ಎನ್.ಎಸ್ ಪ್ರಸಾದ್, ಭಾ.ಆ.ಸೇ,
ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ, ಕರ್ನಾಟಕ ಸರ್ಕಾರ



ಶ್ರೀ ಎನ್.ಎಸ್. ಮೇಘರಿಕ್, ಭಾ.ಪೊ.ಸೇ
ಪೋಲೀಸ್ ಆಯುಕ್ತರು, ಬೆಂಗಳೂರು ನಗರ



ಶ್ರೀ ಕೆ.ಎಸ್. ಸತ್ಯಮೂರ್ತಿ ಭಾ.ಆ.ಸೇ, ಆಯುಕ್ತರು
ಸಾರ್ವಜನಿಕ ಶಿಕ್ಷಣ ಇಲಾಖೆ, ಕರ್ನಾಟಕ ಸರ್ಕಾರ



ಶ್ರೀಮತಿ ಫಿಲೋಮಿನಾ ಲೋಬೊ, ನಿರ್ದೇಶಕರು, (ಪ್ರೌಢ ಶಿಕ್ಷಣ)
ಸಾರ್ವಜನಿಕ ಶಿಕ್ಷಣ ಇಲಾಖೆ, ಕರ್ನಾಟಕ ಸರ್ಕಾರ



ಶ್ರೀ ಕೆ. ಆನಂದ್ ನಿರ್ದೇಶಕರು, (ಪ್ರಾಥಮಿಕ ಶಿಕ್ಷಣ)
ಸಾರ್ವಜನಿಕ ಶಿಕ್ಷಣ ಇಲಾಖೆ, ಕರ್ನಾಟಕ ಸರ್ಕಾರ

# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

*Monthly News Magazine*


Monthly Published by

**The Bharat Scouts & Guides, Karnataka**

State Headquarters, Shanthigruha

# 39, Palace Road, Bengaluru-560 001

Tel : 080-2226 0017, 2226 7470




**ಪರಿವಿಡಿ**




**ಸಂಚಿಕೆಯ ವಾರ್ಷಿಕ ಚಂದಾ ರೂ. 100/-**

**ವಿದ್ಯಾಸಂಸ್ಥೆ ಹಾಗೂ ಸಂಘಸಂಸ್ಥೆಗಳಿಗೆ ವಾರ್ಷಿಕ ಚಂದಾ ರೂ. 100/- ಚಂದಾಹಣವನ್ನು ಸಂಪಾದಕರು, ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ ರಾಜ್ಯ ಕೇಂದ್ರ ಕಛೇರಿ, ಶಾಂತಿಗೃಹ # 39, ಅರಮನೆ ರಸ್ತೆ, ಬೆಂಗಳೂರು-560 001 ದೂ: 080-2226 0017, 2226 7470 ಇಲ್ಲಿಗೆ ಕಳುಹಿಸಲು ಕೋರಿದೆ.**

ನಮ್ಮ ಸಂಸ್ಥೆಯ ವೆಬ್‌ಸೈಟ್ ಹಾಗು ಫೇಸ್‌ಬುಕ್ ಚಾಲನೆಯಲ್ಲಿದೆ : ಸಂಪರ್ಕಿಸಿ

**www.bsgkarnataka.org | www.kondajjibasappa.org**

**Face book ground Link: BSGKJamborette2015**

# ರಾಜ್ಯ ಮುಖ್ಯ ಆಯುಕ್ತರ ನುಡಿ



ನವೆಂಬರ್ ತಿಂಗಳು ರಾಜ್ಯದೆಲ್ಲೆಡೆ ಕನ್ನಡ ರಾಜ್ಯೋತ್ಸವ ಕಾರ್ಯಕ್ರಮಗಳು ಜರುಗುತ್ತಲಿವೆ. ಈ ತಿಂಗಳಲ್ಲೇ ಕತ್ತಲನ್ನು ಹೋಗಲಾಡಿಸಿ ಬೆಳಕನ್ನುಂಟುಮಾಡುವ ದೀಪಾವಳಿ ಹಬ್ಬ ನಾಡಿನೆಲ್ಲೆಡೆ ಆಚರಿಸಲಾಗಿದೆ. ನಮ್ಮ ಚಳವಳಿಗೂ ನವೆಂಬರ್ ಅತ್ಯಂತ ಮಹತ್ವದ ತಿಂಗಳು. ನವೆಂಬರ್ 7ರಂದು ರಾಷ್ಟ್ರದೆಲ್ಲೆಡೆ "ಸಂಸ್ಥಾಪನಾ ದಿನಾಚರಣೆ" ಅತ್ಯಂತ ಯಶಸ್ವಿಯಾಗಿ ಆಚರಿಸಲಾಗಿದೆ.

ಗೌರವಾನ್ವಿತ ರಾಜ್ಯಪಾಲರಾದ ಶ್ರೀ ವಜುಬಾಯ್ ರೂಡಾಬಾಯಿ ವಾಲಾ ಹಾಗೂ ಸನ್ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಸಿದ್ದರಾಮಯ್ಯ ಮತ್ತು ಗೃಹಸಚಿವರಾದ ಶ್ರೀ ಜಿ.ಪರಮೇಶ್ವರ್, ಮಾನ್ಯ ಬೆಂಗಳೂರು ನಗರಾಭಿವೃದ್ಧಿ ಸಚಿವರಾದ ಶ್ರೀ ಕೆ.ಜೆ.ಜಾರ್ಜ್, ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರಾದ ಶ್ರೀ ಯು.ಟಿ.ಖಾದರ್ ಅವರುಗಳನ್ನು ನಾನು ಮತ್ತು ಸಂಸ್ಥೆಯ ಪದಾಧಿಕಾರಿಗಳು ಭೇಟಿಮಾಡಿ "ಸಂಸ್ಥಾಪನಾ ದಿನಾಚರಣೆ"ಯ ಧ್ವಜ ಚೀಟಿಗಳನ್ನು ಗೌರವಾನ್ವಿತರ ಮೂಲಕ ಬಿಡುಗಡೆಗೊಳಿಸಲಾಯಿತು. ಧ್ವಜ ಚೀಟಿಗಳನ್ನು ಬಿಡುಗಡೆಗೊಳಿಸಿದ ಅತಿಥಿಗಳು ಸ್ಕೌಟ್ ಗೈಡ್ ಚಳವಳಿ ರಾಜ್ಯದೆಲ್ಲೆಡೆ ಹೆಚ್ಚಿಸಲು ಎಲ್ಲಾ ರೀತಿಯ ಸಹಕಾರ ನೀಡುವುದಾಗಿ ಭರವಸೆ ನೀಡಿರುತ್ತಾರೆ. ಇದಲ್ಲದೆ ರಾಜ್ಯದ ಹಿರಿಯ ಅಧಿಕಾರಿಗಳಾದ ಕರ್ನಾಟಕ ಸರ್ಕಾರದ ಮುಖ್ಯ ಕಾರ್ಯದರ್ಶಿ ಶ್ರೀ ಕೌಶಿಕ್ ಮುಖರ್ಜಿ, ಹಣಕಾಸು ಇಲಾಖೆ ಪ್ರಧಾನ ಕಾರ್ಯದರ್ಶಿ ಶ್ರೀ ಐ.ಎನ್.ಎಸ್.ಪ್ರಸಾದ್, ಬೆಂಗಳೂರು ನಗರ ಪೋಲೀಸ್ ಆಯುಕ್ತ ಶ್ರೀ ಎನ್.ಎಸ್.ಮೇಘರಿಕ್, ಸಾರ್ವಜನಿಕ ಶಿಕ್ಷಣ ಇಲಾಖೆ ಆಯುಕ್ತ ಶ್ರೀ ಕೆ.ಎಸ್.ಸತ್ಯಮೂರ್ತಿ, ಪ್ರೌಢಶಿಕ್ಷಣ ನಿರ್ದೇಶಕಿಯಾದ ಶ್ರೀಮತಿ ಫಿಲೋಮಿನಾ ಲೋಬೊ ಹಾಗು ಪ್ರಾಥಮಿಕ ಶಿಕ್ಷಣ ನಿರ್ದೇಶಕರಾದ ಶ್ರೀ ಕೆ.ಆನಂದ್ ಅವರುಗಳನ್ನು ಭೇಟಿ ಮಾಡಿ ಧ್ವಜ ಚೀಟಿಗಳನ್ನು ಬಿಡುಗಡೆಗೊಳಿಸಲಾಯಿತು. ಸಂಬಂಧಪಟ್ಟ ಇಲಾಖೆಗಳ ಮುಖ್ಯಸ್ಥರು ಚಳವಳಿಯ ಬೆಳವಣಿಗೆಗೆ ಅವಶ್ಯವಿರುವ ಎಲ್ಲಾ ರೀತಿಯ ಸಹಕಾರ ನೀಡಲು ಸಮ್ಮತಿಸಿರುತ್ತಾರೆ.

ರಾಜ್ಯದ ಎಲ್ಲಾ ಕೇಂದ್ರಗಳು ಹಾಗು ಸ್ಥಳೀಯ ಸಂಸ್ಥೆಗಳು "ಸಂಸ್ಥಾಪನಾ ದಿನಾಚರಣೆ" ಹಾಗು ಧ್ವಜ ಚೀಟಿಗಳ ಬಿಡುಗಡೆ ಕಾರ್ಯಕ್ರಮವನ್ನು ಆಚರಿಸಿದ ಬಗ್ಗೆ ವರದಿಗಳು ಬಂದಿದೆ. ಸಂಬಂಧಪಟ್ಟ ವಿವರಗಳನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗಿದೆ.

ನಿಮಗೆ ಈಗಾಗಲೇ ತಿಳಿದಿರುವಂತೆ 2014-15 ವರ್ಷಪೂರ್ತಿ, ಸಂಸ್ಥೆಯ ರಾಜ್ಯ ಮುಖ್ಯ ಆಯುಕ್ತರಾಗಿ ಬಹಳ ದೀರ್ಘಕಾಲ ಸೇವೆ ಸಲ್ಲಿಸಿದ, ದಿವಂಗತ ಕೊಂಡಜ್ಜಿ ಬಸಪ್ಪ ಅವರ ಜನ್ಮಶತಮಾನೋತ್ಸವ ಕಾರ್ಯಕ್ರಮಗಳನ್ನು ರಾಜ್ಯ ಹಾಗು ಜಿಲ್ಲಾ ಸಂಸ್ಥೆಗಳು ಅವರ ಸ್ಮರಣೆಯಲ್ಲಿ ವಿವಿಧ ಕಾರ್ಯಕ್ರಮ, ತರಬೇತಿಗಳ ಮೂಲಕ ಆಚರಿಸಲಾಗಿದೆ.

ಪ್ರತಿವರ್ಷದಂತೆ ನವೆಂಬರ್ 14ರಂದು ದಿ. ಕೊಂಡಜ್ಜಿ ಬಸಪ್ಪ ಅವರ 33ನೇ ಸ್ಮರಣೋತ್ಸವ ಕಾರ್ಯಕ್ರಮವನ್ನು ಕೊಂಡಜ್ಜಿ ತರಬೇತಿ ಕೇಂದ್ರದಲ್ಲಿ ಆಚರಿಸಲಾಯಿತು. ರಾಜ್ಯದ ವಿವಿಧ ಜಿಲ್ಲೆಗಳಿಂದ 400 ಸ್ಕೌಟ್ಸ್-ಗೈಡ್ಸ್ ಹಾಗೂ ನಾಯಕ-ನಾಯಕಿಯರು ಕಾರ್ಯಕ್ರಮದಲ್ಲಿ ಭಾಗವಹಿಸಿರುತ್ತಾರೆ.

ಹರಿಹರ ಕ್ಷೇತ್ರದ ಮಾನ್ಯ ಶಾಸಕರಾದ ಶ್ರೀ ಹೆಚ್.ಎಸ್.ಶಿವಶಂಕರ್ ಹಾಗು ಕೊಂಡಜ್ಜಿ ಗ್ರಾಮ ಪಂಚಾಯತ್ ಅಧ್ಯಕ್ಷಿಣಿ ಶ್ರೀಮತಿ ಮೀನಾಕ್ಷಮ್ಮ ಸಮಾರಂಭದಲ್ಲಿ ಅತಿಥಿಗಳಾಗಿ ಭಾಗವಹಿಸಿರುತ್ತಾರೆ.

ನವೆಂಬರ್ ತಿಂಗಳಲ್ಲಿ ನಾನು ಚಾಮರಾಜನಗರ, ಮಂಡ್ಯ, ಬೆಂಗಳೂರು ದಕ್ಷಿಣ ಜಿಲ್ಲೆ, ಕೊಂಡಜ್ಜಿ ಹಾಗು ಡಾ. ಆನಿಬೆಸೆಂಟ್ ತರಬೇತಿ ಕೇಂದ್ರ, ದಾವಣಗೆರೆ ಜಿಲ್ಲಾ ಸಂಸ್ಥೆ–ಧಾರವಾಡದ ತರಬೇತಿ ಕೇಂದ್ರ "ಸಸ್ಯಚೇತನ", ಬೆಳಗಾವಿ ಜಿಲ್ಲಾ ಸಂಸ್ಥೆ, ಬಳ್ಳಾರಿ ಜಿಲ್ಲಾ ತರಬೇತಿ ಕಾರ್ಯಕ್ರಮಗಳಲ್ಲಿ ಭಾಗವಹಿಸಿರುತ್ತೇನೆ.

ನಾವುಗಳು ಹೆಮ್ಮೆಪಡಬೇಕಾದ ವಿಷಯವೇನೆಂದರೆ, ದಿ. ಕೊಂಡಜ್ಜಿ ಬಸಪ್ಪ ಅವರ ಜನ್ಮಶತಮಾನೋತ್ಸವ ಕಾರ್ಯಕ್ರಮವನ್ನು ಈ ತಿಂಗಳ 28ರಂದು "ದೆಹಲಿ ಕರ್ನಾಟಕ ಸಂಘದ ಸಭಾಂಗಣ"ದಲ್ಲಿ ಏರ್ಪಡಿಸಿದ್ದು ರಾಷ್ಟ್ರದ ಉಚ್ಚನ್ಯಾಯಾಲಯದ ಮಾನ್ಯ ನ್ಯಾಯಾಧೀಶ ಶ್ರೀ ವಿ.ಗೋಪಾಲಗೌಡ, ಕೇಂದ್ರ ಸಚಿವರುಗಳಾದ ಶ್ರೀ ಅನಂತಕುಮಾರ್, ಶ್ರೀ ಜಿ.ಎಂ. ಸಿದ್ದೇಶ್ವರ್, ಲೋಕಸಭೆಯ ಕಾಂಗ್ರೆಸ್ ನಾಯಕರಾದ ಶ್ರೀ ಮಲ್ಲಿಕಾರ್ಜುನ ಖರ್ಗೆ, ರಾಜಸ್ಥಾನದ ಮಾಜಿ ಮುಖ್ಯಮಂತ್ರಿಗಳೂ ಹಾಗು ಭಾರತ್ ಸ್ಕೌಟ್ಸ್–ಗೈಡ್ಸ್‌ನ ರಾಷ್ಟ್ರೀಯ ಅಧ್ಯಕ್ಷರಾದ ಶ್ರೀ ಅಶೋಕ್ ಗೆಹ್ಲೋಟ್, ಸಂಸ್ಥೆಯ ಮುಖ್ಯ ರಾಷ್ಟ್ರೀಯ ಆಯುಕ್ತ ಶ್ರೀ ಬಿ.ಐ.ನಾಗರಾಳೆ ಸಮಾರಂಭದಲ್ಲಿ ಭಾಗವಹಿಸುತ್ತಾರೆ.

ನವೆಂಬರ್ 14ರಂದು ಕೊಂಡಜ್ಜಿ ತರಬೇತಿ ಕೇಂದ್ರದಲ್ಲಿ ಏರ್ಪಡಿಸಿದ್ದ ತರಬೇತಿ ಶಿಬಿರಗಳ ಸಮಾರಂಭದಲ್ಲಿ ರಾಜ್ಯ ಸಂಸ್ಥೆಯ ಅಂತರ್ಜಾಲತಾಣ ಉದ್ಘಾಟಿಸಲಾಗಿದೆ. ಇದರ ವಿಳಾಸ: www.bsg.karnataka.org. ನಾನೂ ಸಹ ಫೇಸ್‌ಬುಕ್ (Face Book)ನಲ್ಲಿ ಕ್ರಿಯಾತ್ಮಕವಾಗಿ ಭಾಗವಹಿಸುತ್ತಿದ್ದೇನೆ. ನೀವು Face Bookನಲ್ಲಿ ಭಾಗವಹಿಸುತ್ತಿದ್ದರೆ, ನನ್ನೊಂದಿಗೆ ನಿಮ್ಮ ಅಭಿಪ್ರಾಯಗಳನ್ನು ಹಂಚಿಕೊಳ್ಳಬಹುದು.

ಈಗಾಗಲೇ ರಾಜ್ಯದ 21 ಜಿಲ್ಲಾ ಸಂಸ್ಥೆಗಳಲ್ಲಿ ಮೂಲ ತರಬೇತಿ ಶಿಬಿರಗಳನ್ನು ಏರ್ಪಡಿಸಿದ್ದು, 2000ಕ್ಕೂ ಹೆಚ್ಚು ಶಿಕ್ಷಕ/ಶಿಕ್ಷಕಿಯರು ಸ್ಕೌಟ್–ಗೈಡ್ ಕಬ್–ಬುಲ್‌ಬುಲ್ ತರಬೇತಿ ಪಡೆದಿರುತ್ತಾರೆ. ಈ ತಿಂಗಳಲ್ಲೇ 3 ಜಿಲ್ಲಾ ಸಂಸ್ಥೆಗಳು ತರಬೇತಿಗಳನ್ನು ಆಯೋಜಿಸಿರುತ್ತಾರೆ. ಉಳಿದ 12 ಜಿಲ್ಲಾ ಸಂಸ್ಥೆಗಳು ಮುಂದಿನ ತಿಂಗಳಲ್ಲಿ ತರಬೇತಿಗಳನ್ನು ಏರ್ಪಡಿಸಲು ಕ್ರಮಕೈಗೊಂಡಿರುವ ಬಗ್ಗೆ ರಾಜ್ಯ ಸಂಸ್ಥೆಗೆ ವಿವರಗಳು ಬಂದಿರುತ್ತವೆ.

ಈ ತಿಂಗಳ 5ರಂದು ನಮ್ಮ ಸಂಸ್ಥೆಯ ಮಾಜಿ ರಾಜ್ಯ ಮುಖ್ಯ ಆಯುಕ್ತರೂ–ರಾಷ್ಟ್ರೀಯ ಸಂಸ್ಥೆಯಲ್ಲಿ ಸ್ಕೌಟ್ ವಿಭಾಗದ ಮುಖ್ಯಸ್ಥರಾಗಿ ಹಾಗು ರಾಜ್ಯದಲ್ಲಿ ಚಳವಳಿಯ ಬೆಳವಣಿಗೆಗೆ ಗಣನೀಯ ಸೇವೆ ಸಲ್ಲಿಸಿದ್ದ ದಿ. ಪ್ರೊ.ಪಿ.ಶಿವಶಂಕರ್ ಅವರ ಜನ್ಮದಿನೋತ್ಸವವನ್ನು ರಾಜ್ಯ ಕೇಂದ್ರ ಕಚೇರಿಯಲ್ಲಿ ಆಚರಿಸಲಾಯಿತು. ಅವರ ಪುತ್ರರಾದ ಪ್ರೊ. ಎಸ್. ಉದಯಶಂಕರ್, ಅಧ್ಯಕ್ಷರು, ಜಗದ್ಗುರು ಶ್ರೀ ರೇಣುಕಾಚಾರ್ಯ ವಿದ್ಯಾಸಂಸ್ಥೆ ಹಾಗು ಅವರ ಸೊಸೆ ಶ್ರೀಮತಿ ಭಾರತಿ ಗಿರಿಜಾಶಂಕರ್ ಸಮಾರಂಭದಲ್ಲಿ ಭಾಗವಹಿಸಿದರು.

ರಾಜ್ಯ ಪ್ರವಾಸೋದ್ಯಮ ಇಲಾಖೆಯ ಮುಖೇನ ಪ್ರಥಮ ಬಾರಿಗೆ ರಾಜ್ಯದ 3500 ಸ್ಕೌಟ್ಸ್–ಗೈಡ್ಸ್‌ಗಳಿಗೆ "ಕರ್ನಾಟಕ ದರ್ಶನ" ಎಂಬ ಕಾರ್ಯಕ್ರಮವನ್ನು ರಾಜ್ಯದ 33 ಜಿಲ್ಲಾ ಸಂಸ್ಥೆಗಳ ಮುಖೇನ ಆಯೋಜಿಸಲಾಗಿದ್ದು, ಈ ಕಾರ್ಯಕ್ರಮದ ಸಂಪೂರ್ಣ ಹೊಣೆಗಾರಿಕೆಯನ್ನು ಜಿಲ್ಲಾ ಸಂಸ್ಥೆ ಪದಾಧಿಕಾರಿಗಳ – ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರುಗಳ ಮಾರ್ಗದರ್ಶನ ಹಾಗೂ ನಾಯಕತ್ವದಲ್ಲಿ ಏರ್ಪಡಿಸಲಾಗಿದೆ. ರಾಜ್ಯದ ಚಳವಳಿಯ ಇತಿಹಾಸದಲ್ಲಿ ಪ್ರಥಮ ಬಾರಿಗೆ ಈ ಅವಕಾಶ ಸ್ಕೌಟ್ಸ್–ಗೈಡ್ಸ್‌ಗಳಿಗೆ ಲಭ್ಯವಾಗಿದ್ದು, ಇದರ ಸದುಪಯೋಗವನ್ನು ಪಡೆಯುವಲ್ಲಿ ಜಿಲ್ಲಾ ಸಂಸ್ಥೆಗಳ ಪದಾಧಿಕಾರಿಗಳು ಹಾಗು ಜಿಲ್ಲೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಜಿಲ್ಲಾ ಸ್ಕೌಟ್–ಗೈಡ್ ಸಂಘಟಕರುಗಳು ಈ ಕಾರ್ಯಕ್ರಮ ಯಶಸ್ವಿಗೊಳಿಸಲು ಬೇಕಾದ ಸೂಕ್ತ ತಯಾರಿಮಾಡಿ "ಕರ್ನಾಟಕ ದರ್ಶನ"ದಲ್ಲಿ ಸ್ಕೌಟ್ಸ್–ಗೈಡ್ಸ್‌ಗಳು ಉತ್ಸುಕರಾಗಿ ಭಾಗವಹಿಸಿ ಚಳವಳಿಯ ಬೆಳವಣಿಗೆಗೆ ಸಹಕಾರಿಯಾಗಲೆಂದು ಶುಭಕೋರುತ್ತೇನೆ.

ತಮ್ಮ ವಿಶ್ವಾಸಿ

.ಜಿ.ಆರ್. ಸಿಂಧ್ಯ
ರಾಜ್ಯ ಮುಖ್ಯ ಆಯುಕ್ತರು

# ರಾಜ್ಯ ಕಾರ್ಯದರ್ಶಿಗಳ ನುಡಿ

ನಮ್ಮ ದೇಶದ ಮೊದಲ ಪ್ರಧಾನಮಂತ್ರಿ ಜವಹರ್‌ಲಾಲ್ ನೆಹರು ಅವರು ನಿಧನರಾಗಿ 50 ವರ್ಷಗಳಾಗುತ್ತಿದೆ, ಹಾಗೆಯೇ ಈ ನವಂಬರ್ ತಿಂಗಳು ಅವರು ಹುಟ್ಟಿ 125 ವರ್ಷವಾಯಿತು. ಇದೇ ರೀತಿ ಇದೇ ನವಂಬರ್ ತಿಂಗಳ 19ಕ್ಕೆ ಇಂದಿರಾಗಾಂಧಿ ಅವರು ಬದುಕಿದ್ದರೆ 98 ವರ್ಷವಾಗಿರುತ್ತಿತ್ತು. ಸ್ವಾತಂತ್ರ್ಯಾನಂತರ ನಮ್ಮ ದೇಶ ಕಂಡ ಧೀಮಂತ ವ್ಯಕ್ತಿತ್ವ ಹೊಂದಿದ್ದ ಜವಹರ್‌ಲಾಲ್ ನೆಹರು ಹಾಗೂ ಇಂದಿರಾಗಾಂಧಿಯವರು ತಲಾ 17 ವರ್ಷ.... ಅಂದರೆ ಒಟ್ಟು 34 ವರ್ಷ ಈ ದೇಶವನ್ನು ಪ್ರಧಾನಿಗಳಾಗಿ ಆಳ್ವಿಕೆ ನಡೆಸಿದ್ದಾರೆ. ನೆಹರು ಪ್ರಧಾನಿಯಾಗಿ ರಕ್ಷಣಾನೀತಿ, ವಿದೇಶಾಂಗ ನೀತಿಗಳನ್ನು ಜಾರಿಗೆ ತಂದರು. ಇವರ ಅವಧಿಯಲ್ಲೇ ಸಂವಿಧಾನ ರಚನೆಯಾಗಿ ಆಡಳಿತ ವ್ಯವಹಾರದಲ್ಲಿ ಅಳವಡಿಸಿಕೊಂಡೆವು. ಭಾಷಾವಾರು ರಾಜ್ಯಗಳು ರಚನೆಯಾದವು. ಸಾರ್ವತ್ರಿಕ ಚುನಾವಣೆಗಳನ್ನು ನಡೆಸಲಾಯಿತು. ಪಂಚವಾರ್ಷಿಕ ಯೋಜನೆಗಳನ್ನು ಜಾರಿಗೆ ತಂದು ದೇಶವನ್ನು ಅಭಿವೃದ್ಧಿ ಪಥದ ಮಾರ್ಗದಲ್ಲಿ ಮುನ್ನಡೆಸುವಲ್ಲಿ ನೆಹರು ಅವರ ದೂರ ದೃಷ್ಟಿಯನ್ನು ಮೆಚ್ಚಲೇ ಬೇಕು.

ಸ್ವಾತಂತ್ರ್ಯ ಚಳವಳಿಯಲ್ಲಿ ಸಕ್ರಿಯರಾಗಿದ್ದ ನೆಹರು ಅವರನ್ನು ಬ್ರಿಟೀಶ್ ಆಡಳಿತಗಾರರು 22 ಸಲ ಸೆರೆವಾಸಕ್ಕೆ ದೂಡಿದರು. ಒಟ್ಟು ಎಂಟು ವರ್ಷ ಜೈಲಿನಲ್ಲಿದ್ದ ನೆಹರು ಸೆರೆವಾಸದ ಅವಧಿಯಲ್ಲಿ ಪುಸ್ತಕ ರಚನೆಯಲ್ಲಿ ತೊಡಗಿಸಿಕೊಂಡಿದ್ದರು. ಅವರ Discovery of India ದೇಶದ ಪರಿಚಯ ಮಾಡಿಸುತ್ತೆ. ಜೈಲಿನಲ್ಲಿದ್ದುಕೊಂಡೇ ಮಗಳು ಇಂದಿರಾಗಾಂಧಿಗೆ ರಾಜಕೀಯ ವ್ಯವಹಾರಗಳ ಬಗ್ಗೆ ಪತ್ರಗಳನ್ನು ಬರೆಯುತ್ತಿದ್ದರು. ಜೈಲಿನ ಏಕಾಂತದ ದಿನಗಳಲ್ಲಿ ಬರವಣಿಗಾಗಿ ಬಳಸಿಕೊಂಡ ಅಪರೂಪದ ವ್ಯಕ್ತಿತ್ವ ನೆಹರು ಅವರದ್ದು.

ಹೀಗೆಯೇ ಇಂದಿರಾಗಾಂಧಿ ಅವರನ್ನು ಸ್ಮರಿಸಿಕೊಂಡರೆ " ಗರಿಭಿ ಹಟಾವೋ" (ಬಡತನ ತೊಲಗಿಸಿ) ಮುಖ್ಯವಾಗಿ ಕಾಣುತ್ತದೆ. ಸಾರಿಗೆವ್ಯವಸ್ಥೆ, ಬ್ಯಾಂಕುಗಳ ರಾಷ್ಟ್ರೀಕರಣ ಮಾಡಿ ಜನಸಾಮಾನ್ಯರ ಸೇವೆಗಾಗಿ ಬ್ಯಾಂಕಿಂಗ್ ವ್ಯವಹಾರವನ್ನು ಮುಕ್ತವಾಗಿಸಿದ್ದು ಇಂದಿರಾಗಾಂಧಿ ಅವರ ಸಾರ್ವಜನಿಕ ಸೇವೆಯ ಬಗ್ಗೆ ಇದ್ದ ಕಾಳಜಿ ಅರ್ಥವಾಗುತ್ತೆ. ಇವರ ಅವಧಿಯಲ್ಲಿಯೇ 1969ರಲ್ಲಿ ಕಾಂಗ್ರೆಸ್ ಇಬ್ಭಾಗವಾಯಿತು. ಇಂದಿರಾಗಾಂಧಿಯ ವ್ಯಕ್ತಿತ್ವದಲ್ಲಿದ್ದ ನಾಯಕತ್ವ ಹರಿತವಾಗುತ್ತಾ ಹೋಯಿತು. ಆರಂಭದಲ್ಲಿ ಕೇಂದ್ರದಲ್ಲಿ ವಾರ್ತಾಸಚಿವರಾಗಿ ಕಾರ್ಯನಿರ್ವಹಿಸಿದ ಇಂದಿರಾಗಾಂಧಿ, ಅವರಿಗೆ ಪ್ರಧಾನಿಯಾಗುವ ಅವಕಾಶ, ಲಾಲ್‌ಬಹದ್ದೂರ ಶಾಸ್ತ್ರಿ ಅವರ ನಿಧನರಾದ್ದರಿಂದ ಲಭ್ಯವಾಯಿತು. 1969ರ ನಂತರ ಇಂದಿರಾಗಾಂಧಿ ರಾಜಕೀಯವಾಗಿ ದಿಟ್ಟ ನಿರ್ಧಾರಗಳನ್ನು ತೆಗೆದುಕೊಂಡರು. ಬಡವರು, ದಲಿತರ ಹಾಗೂ ವೃದ್ಧರಿಗೆ ಅನುಕೂಲವಾಗುವ ಯೋಜನೆಗಳನ್ನು ಜಾರಿಗೆ ತಂದರು, ಸಾರ್ವತ್ರಿಕ ಚುನಾವಣೆಗಳಲ್ಲಿ ಕಾಂಗ್ರೆಸ್‌ನಲ್ಲಿ ಸ್ಪರ್ಧಿಸುವ ಅವಕಾಶ ಸಿಕ್ಕಿದರೆ ಗೆಲುವು ಬಹುತೇಕ ನಿಚ್ಚಳವಾಗುತ್ತಿತ್ತು. ರಾಜಕೀಯವಾಗಿ ದಿಟ್ಟತನದಿಂದ ಬೆಳಯುತ್ತಿದ್ದ ಇಂದಿರಾಜಿ ಅವರಗೆ ಉತ್ತರ ಪ್ರದೇಶದ ರಾಯ್‌ಬರೇಲಿ ಕ್ಷೇತ್ರದಿಂದ ವಾಮಮಾರ್ಗದಿಂದ ಚುನಾವಣೆಯಲ್ಲಿ ಗೆದ್ದಿದ್ದಾರೆ ಎಂಬ ಆರೋಪ ಕುರಿತಂತೆ ಅಲಹಾಬಾದ್ ಕೋರ್ಟನ ತೀರ್ಪು ಮುಳುವಾಯಿತು.

ಪ್ರಧಾನಿ ಗದ್ದುಗೆಯಲ್ಲಿದ್ದ ಇಂದಿರಾಜಿಗೆ ನ್ಯಾಯಾಲದ ತೀರ್ಪು ಮೆಟ್ಟಿ ನಿಲ್ಲಲು ತುರ್ತು ಸ್ಥಿತಿ ತಂದರು, ಪ್ರತಿ ಪಕ್ಷಗಳ ನಾಯಕರನ್ನು ಜೈಲಿಗಟ್ಟಿ, ಮಾಧ್ಯಮಗಳ ಅಬಿವ್ಯಕ್ತಿ ಸ್ವಾತಂತ್ರ್ಯಕ್ಕೂ ಕಡಿವಾಣ ಹಾಕಿದರು. ದೇಶದಾದ್ಯಂತ ಇಂದಿರಾಜಿ ಅವರ ವಿರುದ್ಧ ಪ್ರತಿಪಕ್ಷಗಳ ನಾಯಕರು ಒಂದಾದರು, 1970ರ ದಶಕದಲ್ಲಿ ಏರುಗತಿಯಲ್ಲಿದ್ದ ಇಂದಿರಾಜಿ ವ್ಯಕ್ತಿತ್ವಕ್ಕೆ

ತುರ್ತುಸ್ಥಿತಿ ಧಕ್ಕೆ ತಂದಿತು. 1977ರಲ್ಲಿ ಎದುರಾದ ಸಾರ್ವತ್ರಿಕ ಚುನಾವಣೆಯಲ್ಲಿ ಜನತಾ ಪರಿವಾರದ ಪಕ್ಷದ ಎದುರು ಕಾಂಗ್ರೆಸ್ ಸೋಲನುಭವಿಸಿತು. ಜನತಾ ಪಕ್ಷದಿಂದ ಮೋರಾರ್ಜಿದೇಸಾಯಿ ಪ್ರಧಾನಿಯಾದರು. ದೇಶದಲ್ಲಿ ಮೊಟ್ಟ ಮೊದಲ ಭಾರಿಗೆ ಕಾಂಗ್ರೆಸ್‌ನ್ನು ಜನರು ಪ್ರತಿ ಪಕ್ಷದ ಸಾಲಿನಲ್ಲಿ ನಿಲ್ಲಿಸಿದರು. ಮತ್ತೆ ಜನತಾ ಪಕ್ಷದ ಒಳಜಗಳದಿಂದಾಗಿ, ಎದುರಾದ ಸಾರ್ವತ್ರಿಕ ಚುನಾವಣೆಯಲ್ಲಿ ಮತ್ತೆ ಕಾಂಗ್ರೆಸ್ ಅಧಿಕಾರಕ್ಕೆ ಬಂದಿತು, ಇಂದಿರಾ ಅವರು ರಾಜಕೀಯವಾಗಿ ಮತ್ತೆ ಪುಟಿದೆದ್ದು ಪ್ರಧಾನಿಯಾದರು. 1984ರ ಅಕ್ಟೋಬರ್ 31 ರಂದು ಇಂದಿರಾ ಅವರ ಬೆಂಗಾವಲು ಪಡೆಯಿಂದಲೇ ದಿಲ್ಲಿಯ ಸ್ವಗೃಹದಲ್ಲಿ ಹತ್ಯೆಯಾದರು.

ಇಂದಿರಾಗಾಂಧಿ ಅವರ ಬಗ್ಗೆ ಇದಿಷ್ಟನ್ನೇ ಬರೆದರೆ ಸಾಲದು. ಆಕೆಯ ಬಾಲ್ಯ ಭವ್ಯ ಭವನದ ಮನೆಯಲ್ಲಿ ಏಕಾಂತದ ಒಂಟಿ ದಿನಗಳಾಗಿದ್ದವು. ಅವರ ತಾಯಿ ಸ್ವರೂಪರಾಣಿ ಕ್ಷಯರೋಗಕ್ಕೆ ಬಲಿಯಾಗಿದ್ದರು, ತಬ್ಬಲಿಯಾಗಿದ್ದ ಇಂದಿರಾ, ಮೇಧಾವಿ ರಾಜಕೀಯ ಗಣ್ಯರಾದ ಗಾಂಧೀಜಿ, ಸರದಾರ್ ವಲಭಬಾಯಿಪಟೇಲ್, ಸುಭಾಶ್‌ಚಂದ್ರಬೋಸ್ ಅವರಂಥಹ ಸಾಮೀಪ್ಯ ಪಡೆದಿದ್ದರು. ಬ್ಯಾಲದಲ್ಲಿಯೇ ರಾಜಕೀಯ ವ್ಯವಹಾರಗಳ ಚತುರೋಪಾಯಗಳ ಚರ್ಚೆಗಳಿಗೆ ಇಂದಿರಾಜಿ ಕಿವಿಕೊಡುತ್ತಿದ್ದರು. ಅತ್ತ ತಂದೆ ಜೈಲು ಪಾಲಾಗಿ ಪತ್ರಗಳ ಮೂಲಕ ಮಗಳೊಂದಿಗೆ ಮಾತನಾಡುತ್ತಿದ್ದರು. ಇನ್ನು ಪ್ರಾಯದ ದಿನಗಳಲ್ಲಿ ಫೀರೋಜ್ ಗಾಂಧಿಯ ಪ್ರೀತಿಗೊಲಿದು ಮದುವೆಯಾದರು.

ಆದರೆ, ದಾಂಪತ್ಯ ಜೀವನ ಹೊಂದಾಣಿಕೆಯಾಗಿರಲಿಲ್ಲ. ರಾಜೀವ್‌ಗಾಂಧಿ ಮತ್ತು ಸಂಜಯ್‌ಗಾಂಧಿ ಮುದ್ದು ಮಕ್ಕಳ ತಾಯಿಯಾದ ಇಂದಿರಾ ಅವರ, ಬಾಲ್ಯ , ವಿದ್ಯಾರ್ಥಿ ಜೀವನ ಮತ್ತು ಪ್ರಾಯದ ದಿನಗಳು ಅನೇಕ ವಿಚಿತ್ರ ತಿರುವುಗಳನ್ನು ಕಂಡಿತ್ತು. ಆದ್ದರಿಂದಲೇ ಏನೋ ಇಂದಿರಾಜಿ ಅವರ ವ್ಯಕ್ತಿತ್ವದ ಒಳಗೆ ದಿಟ್ಟತನವೆಂಬುದ ಗಟ್ಟಿಯಾಗಿ ತಳವೂರಿತ್ತು. ಈ ಗಟ್ಟಿತನವನ್ನು ಅವರು ಪ್ರಧಾನನಿಯಾಗಿ ಆಳ್ವಿಕೆ ನಡೆಸಿದ 17 ವರ್ಷಗಳಲ್ಲಿಯೂ ಕಾಣಬಹದು.

ನಾವು ಇಂದು 60ನೇ ಸ್ವಾತಂತ್ರ್ಯದ ವರ್ಷಾಚರಣೆಯನ್ನು ಆಚರಿಸಿಕೊಂಡಿದ್ದೇವೆ, ಅಂದರೆ ನಮ್ಮ ದೇಶಕ್ಕೆ ರಾಜಕೀಯ ಸ್ವಾತಂತ್ರ್ಯ ಬಂದು 68 ವರ್ಷಗಳಾಯಿತು, ಅಂದರೆ ಈ 68 ವರ್ಷಗಳಲ್ಲಿ 34 ವರ್ಷ ಆಡಳಿತವನ್ನು ಪ್ರಧಾನಿಗಳಾಗಿ ನೆಹರು ಮತ್ತು ಇಂದಿರಾ ನೀಡಿದ್ದಾರೆ, ಭಾರತದ ರಾಜಕೀಯ ಇತಿಹಾಸದಲ್ಲಿ ಇವರಿಬ್ಬರದ್ದು ಅಳಿಸಲಾಗದ ದಿಟ್ಟ ಹೆಜ್ಜೆಗಳನ್ನು ಬಿಟ್ಟು ಹೋಗಿದ್ದಾರೆ. ಇದರ ಜೊತೆಗೆ ಅವರ ಮನೆತನದ ರಾಜೀವ್ ಗಾಂಧಿ ಅವರು ಪ್ರಧಾನಿಗಳಾಗಿದ್ದರು, ಇಂದಿಗೂ ನೆಹರು ಪರಿವಾರದ ಮನೆತನದ ಸೊಸೆ ಸೋನಿಯಗಾಂಧಿ ಮತ್ತು ಅವರ ಮಗ ರಾಹುಲ್ ಗಾಂಧಿ ಅವರು ಕಾಂಗ್ರೆಸ್ ಪಕ್ಷದಲ್ಲಿ ಪ್ರಶ್ನಾತೀತ ನಾಯಕರಾಗಿ ಉಳಿದಿದ್ದಾರೆ.

ಇದೇ ಸಂಧರ್ಭದಲ್ಲಿ ನಾನು ನವಂಬರ್ 14ರ ದಿನಾಂಕಕ್ಕೆ ಮತ್ತೊಂದು ಮಹತ್ವವಿದೆ, ಅದು ಕರ್ನಾಟಕದ ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯ ಅಗ್ರಗಣ್ಯರ ಸಾಲಿನಲ್ಲಿ ಕಂಗೊಳಿಸುತ್ತಿರುವ ದಿವಂಗತ ಕೊಂಡಜ್ಜಿ ಬಸಪ್ಪನವರು ನಿಧನರಾದ ದಿನ. ಅವರು ಹಾಕಿಕೊಟ್ಟ ಮಾರ್ಗದರ್ಶನದಿಂದ ಕರ್ನಾಟಕದಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿ ಕ್ರೀಯಶೀಲವಾಗಿದೆ. ಅವರ ಆದರ್ಶಗಳು ಇತರಿಗೆ ದಾರಿದೀಪವಾಗಿದೆ. ಈ ವರ್ಷ ಅವರ ಜನ್ಮಶತಮಾನೋತ್ಸವ ಆಚರಿಸುತ್ತಿದ್ದೇವೆ. ಅವರನ್ನು ಸ್ಮರಿಸುವ ಕಾರ್ಯಕ್ರಮ ದೆಹಲಿಯಲ್ಲಿ ಅತುತ್ತಮವಾಗಿ ನಡೆದಿದೆ. ಈ ನವಂಬರ್ ತಿಂಗಳು ನೆಹರು ಹಾಗೂ ಇಂದಿರಾಜಿ ಅವರ ಜನ್ಮದಿನವನ್ನು ಆಚರಿಸುವ ದಿನಗಳು ಬರುವುದರ ಜೊತೆಗೆ.... ನವಂಬರ್ 14 ರಂದು ಕೊಂಡಜ್ಜಿ ಬಸಪ್ಪ ಅವರು ನಿಧನರಾದ ದಿನ.ಇವರುಗಳದ್ದು ಅರ್ಥಪೂರ್ಣವಾದ ಸಾರ್ಥಕ ಬದುಕು.

ತಮ್ಮ ವಿಶ್ವಾಸಿ

ಸಿದ್ದಯ್ಯ

ರಾಜ್ಯ ಕಾರ್ಯದರ್ಶಿ

# ರಾಜ್ಯ ವಾರ್ತೆಗಳು . . . . .

## ದಕ್ಷಿಣ ಪ್ರಾದೇಶಿಕ ಮಟ್ಟದ ಪ್ರೀ ಎ.ಎಲ್.ಟಿ. ಮತ್ತು ಆರ್.ಒ.ಟಿ. ತರಬೇತಿ ಶಿಬಿರಗಳು

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ಹಾಗೂ ದಕ್ಷಿಣ ಪ್ರಾದೇಶಿಕ ಕೇಂದ್ರ ಕಛೇರಿಯ ಸಹಯೋಗದೊಂದಿಗೆ ಡಾ. ಅನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರಕೇಂದ್ರ, ದೊಡ್ಡಬಳ್ಳಾಪುರದಲ್ಲಿ ದಿನಾಂಕ 05-10-2015 ರಿಂದ 09-10-2015 ರ ವರೆಗೆ ಪ್ರೀ ಎ.ಎಲ್.ಟಿ. ಮತ್ತು ತರಬೇತಿದಾರರಿಗೆ ಆರ್.ಒ.ಟಿ. ತರಬೇತಿಯನ್ನು ಏರ್ಪಡಿಸಲಾಗಿತ್ತು.

ಈ ತರಬೇತಿ ಶಿಬಿರದಲ್ಲಿ ಪ್ರೀ ಎ.ಎಲ್.ಟಿ. ತರಬೇತಿ ಶಿಬಿರಕ್ಕೆ ಶ್ರೀ ಅರೂಪ್ ಸರಕಾರ್ ಎಲ್.ಟಿ(ಸ್ಕೌಟ್) ಸಹ ನಿರ್ದೇಶಕರು ದಕ್ಷಿಣ ಪ್ರಾಂತ್ಯ, ನಾಯಕರಾಗಿ ಆಗಮಿಸಿದ್ದರು. ಶ್ರೀ ಪಿ. ಮಂಜುನಾಥಪ್ಪ, ಕರ್ನಾಟಕ, ಶ್ರೀಮತಿ ರಾಧಮ್ಮ, ಕರ್ನಾಟಕ, ಶ್ರೀ ಪಿ. ಅಬ್ದುಲ್ ಮಜೀದ್, ಕೇರಳ, ಶ್ರೀ ರಾಮಮೋಹನ ರಾವ್, ಆಂದ್ರಪ್ರದೇಶ, ಶ್ರೀ ಕೆ. ಏಕಾಂಬರಮ್, ಶ್ರೀ ವಿ. ನಾರಾಯಣಸ್ವಾಮಿ ಮತ್ತು ಶ್ರೀ ರಾಜು ತಮಿಳುನಾಡು ಸಹಾಯಕರಾಗಿದ್ದರು. ಈ ತರಬೇತಿಯಲ್ಲಿ 38 ಶಿಬಿರಾರ್ಥಿಗಳು ಭಾಗವಹಿಸಿದ್ದರು.

ಆರ್.ಓ.ಟಿ. ತರಬೇತಿಗೆ ಶ್ರೀ ಕೃಷ್ಣಸ್ವಾಮಿ ರಾಮಮುರ್ತಿ, ಜಂಟಿ ನಿರ್ದೇಶಕರು (ಸ್ಕೌಟ್) ನಾಯಕರಾಗಿದ್ದರು. ಸಹನಾಯಕರಾಗಿ ಶ್ರೀ ಚಿನ್ನಸ್ವಾಮಿರೆಡ್ಡಿ, ಎಲ್.ಟಿ. (ಸ್ಕೌಟ್) ರವರು ಕಾರ್ಯನಿರ್ವಹಿಸಿದರು. ಈ ತರಬೇತಿಗೆ 35 ಶಿಬಿರಾರ್ಥಿಗಳು ಹಾಜರಿದ್ದರು.

* ದಿನಾಂಕ 07-10-2015 ರಂದು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರು ಶಿಬಿರಕ್ಕೆ ಭೇಟಿ ನೀಡಿ ಶಿಬಿರಾರ್ಥಿಗಳನ್ನು ಕುರಿತು ಮಾತನಾಡುತ್ತಾ ಸ್ಕೌಟ್ಸ್-ಗೈಡ್ಸ್‌ಗಳಿಗೆ ಗುಣಾತ್ಮಕವಾದ ಶಿಕ್ಷಣವನ್ನು ನೀಡಲು ಸಂಖ್ಯಾತ್ಮಕ ಬೆಳವಣಿಗೆಗೆ, ಸಹಕರಿಸುವಂತೆ ತಿಳಿಸಿದರು. ದಿನಾಂಕ 08-10-2015 ರಂದು ಶ್ರೀ ಎಂ.ಎ. ಖಾಲೀದ್, ರಾಜ್ಯ ಆಯುಕ್ತರು(ಸ್ಕೌಟ್ಸ್) ಹಾಗೂ ಅಂತರರಾಷ್ಟ್ರೀಯ ಆಯುಕ್ತರು ಭೇಟಿ ನೀಡಿ ಶಿಬಿರಾರ್ಥಿಗಳನ್ನು ಉದ್ದೇಶಿಸಿ ಮಾತನಾಡಿ ವಿಶ್ವ ಸ್ಕೌಟಿಂಗ್ ಬಗ್ಗೆ ಮಾಹಿತಿ ನೀಡಿದರು, ಹಾಗು ಗೈಡ್ ಶಾಖೆಯ ಹಿಮಾಲಯ ವುಡ್ ಬ್ಯಾಡ್ಜ್ ತರಬೇತಿ ಶಿಬಿರವನ್ನು ಉದ್ಘಾಟಿಸಿದರು. ಶ್ರೀಮತಿ ಪಿ. ಸರೋಜ ಅವರು ಎಲ್.ಟಿ. (ಗೈಡ್)ರವರು ಈ ಶಿಬಿರದ ನಾಯಕಿಯಾಗಿ ಕಾರ್ಯ ನಿರ್ವಹಿಸಿದರು. ದಿನಾಂಕ 09-10-2015 ರಂದು ಶಿಬಿರದಲ್ಲಿ ಸರ್ವಧರ್ಮ ಸಮನ್ವಯ ಪ್ರಾರ್ಥನೆಯನ್ನು ನಡೆಸಲಾಯಿತು.

## ಜೋಟಾ - ಜೋಟಿ ಕಾರ್ಯಕ್ರಮ

ದಿನಾಂಕ 17-10-2015 ಮತ್ತು 18-10-2015 ರಂದು ರಾಜ್ಯ ಕೇಂದ್ರ ಕಾಯಾಲಯದಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಮತ್ತು ಬೆಂಗಳೂರು ಅಮೆಚೂರು ರೇಡಿಯೋ ಕ್ಲಬ್ ಇವರ ಸಂಯುಕ್ತ ಆಶ್ರಯದಲ್ಲಿ ಜೋಟಾ-ಜೋಟಿ ಕಾರ್ಯಕ್ರಮವನ್ನು ಸಂಘಟಿಸಲಾಗಿತ್ತು ಈ ಕಾರ್ಯಕ್ರಮದಲ್ಲಿ ಬೆಂಗಳೂರು ಉತ್ತರ ಮತ್ತು ದಕ್ಷಿಣ ಜಿಲ್ಲೆಗಳಿಂದ 160 ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳು ಭಾಗವಹಿಸಿದ್ದರು.

ಬೆಂಗಳೂರು ಅಮೆಚೂರ್ ರೇಡಿಯೋ ಕ್ಲಬ್‌ನ ಅಧ್ಯಕ್ಷರಾದ ಶ್ರೀ ರಾಮ್ ಮೋಹನ್. ಶ್ರೀ ಕಿರಣ್ ಕುಮಾರ್, ಗೌರವ ಕಾರ್ಯದರ್ಶಿಯವರು ಸಮಾರಂಭದಲ್ಲಿ ಉಪಸ್ಥಿತರಿದ್ದರು. ಶ್ರೀ ಟಿ.ಎ. ಮಂಜುನಾಥಾಚಾರ್, ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್ಸ್) ರವರು ಸರ್ವರನ್ನು ಸ್ವಾಗತಿಸಿ ಜೋಟಾ-ಜೋಟಿ ಬಗ್ಗೆ ತಿಳಿಸಿದರು.

ಈ ಕೆಳಕಂಡ ರೇಡಿಯೋ ಸ್ಟೇಷನ್‌ಗಳನ್ನು ಸ್ಕೌಟ್ಸ್-ಗೈಡ್ಸ್ / ರೋವರ್ಸ್-ರೇಂಜರ್ಸ್‌ಗಳು ಸಂಪರ್ಕಿಸಿ ಸ್ಕೌಟಿಂಗ್/ಗೈಡಿಂಗ್ ವಿಚಾರ ವಿನಿಮಯ ಮಾಡಿಕೊಂಡರು. ಇಡುಕ್ಕಿ, ತಾಲಿ ಪರಿನತ, ಕಾಟಪಾಡಿ, ಪೆರಂಬೂರು, ತಿರುವನಂತಪುರ, ಸುಲ್ತಾನ್ ಬತೇರಿ

**ಕೆಳಕಂಡ ಹ್ಯಾಮ್ ಸ್ಟೇಷನ್‌ಗಳ ಜೊತೆ ಸಂಪರ್ಕಿಸಲಾಯಿತು.**

VU3EBJ – ಶ್ರೀ ಜೋಮನ್, VU2SVF – ಶ್ರೀ ಸುಬ್ಬು, VU3RGB – ಶ್ರೀ ರಮೇಶ್, VU2INA – VU3SEQ – ಶ್ರೀ ಸುಧಾಕರನ್, VU2MIE –, VU2PKD – VU2FWR – ಶ್ರೀ ರಾಜೇಶ್, VU2IMB – VU3MCI – VU2MJE – AU2PLR, AU2TLP, AU2ATT.

ದಿನಾಂಕ 17–10–2015 ರಂದು ವಿಪತ್ತು ನಿರ್ವಣೆ ಬಗ್ಗೆಯ ಸಹ ಸ್ಕೌಟ್ಸ್–ಗೈಡ್ಸ್, ರೋವರ್ಸ್–ರೇಂಜರ್ಸ್‌ಗಳಿಗೆ ಮಾಹಿತಿ ನೀಡಲಾಯಿತು. ವೈದ್ಯಕೀಯ ನಿರ್ವಹಣೆ, ಸಂಚಾರ ನಿರ್ವಹಣೆ, ಅಗ್ನಿ ನಿರ್ವಹಣೆ, ಗುಂಪು ನಿಯಂತ್ರಣ, ಮಾಧ್ಯಮ ನಿರ್ವಹಣೆ ಇತ್ಯಾದಿಗಳ ಬಗ್ಗೆ ಮಾಹಿತಿ ನೀಡಲಾಯಿತು.

ದಿನಾಂಕ 18–10–2015 ರಂದು ಶ್ರೀ ಪಿ.ಜಿ.ಆರ್. ಸಿಂಧ್ಯ ರಾಜ್ಯ ಮುಖ್ಯ ಆಯುಕ್ತರವರು ಕಾರ್ಯಕ್ರಮದಲ್ಲಿ ಬಾಗವಹಿಸಿ ಹ್ಯಾಮ್ ರೇಡಿಯೋ ಬಗ್ಗೆ ಮಾತನಾಡುತ್ತಾ ಸ್ಕೌಟ್ಸ್–ಗೈಡ್ಸ್, ರೋವರ್ಸ್–ರೇಂಜರ್ಸ್‌ಗಳು ಜೀವನದಲ್ಲಿ ಆಸಕ್ತಿ ವಹಿಸಿ ಒಂದೊಂದು ಟೀಮ್ ಮಾಡಿಕೊಂಡು ಜೋಟಾ–ಜೋಟಿ ಬಗ್ಗೆ ಕೆಲಸ ಮಾಡುವಂತೆ ತಿಳಿಸಿದರು ಮತ್ತು ಡಿಸೆಂಬರ್ ತಿಂಗಳಲ್ಲಿ ರೋವರ್ಸ್–ರೇಂಜರ್ಸ್‌ಗಳಿಗೆ ಹ್ಯಾಮ್ ರೇಡಿಯೋ ತರಬೇತಿಯನ್ನು ನೀಡಿ ಪ್ರತೀ ಜಿಲ್ಲೆಗಳಲ್ಲಿ ಹ್ಯಾಮ್ ಸ್ಟೇಷನ್‌ಗಳನ್ನು ಮಾಡುತ್ತೇವೆಂದು ತಿಳಿಸಿದರು.

ಈ ಕಾರ್ಯಕ್ರಮದಲ್ಲಿ ರಾಜ್ಯ ತರಬೇತಿ ಆಯುಕ್ತರಾದ ಶ್ರೀ ಎಲ್.ಟಿ. ಲೋಕೇಶ್, ಶ್ರೀಮತಿ ಶಾಮಲ, ಮತ್ತು ಶ್ರೀ ತಿಪ್ಪೇಸ್ವಾಮಿ, ರೋವರ್ ನಾಯಕ, ಉಪಸ್ಥಿತರಿದ್ದರು. ಕೊನೆಯಲ್ಲಿ ಶ್ರೀ ಟಿ.ಎ. ಮಂಜುನಾಥಾಚಾರ್, ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್ಸ್)ರವರು ವಂದನಾರ್ಪಣೆ ಸಲ್ಲಿಸಿದರು.

## ದಿ|| ಜಸ್ಟೀಸ್ ಕೆ. ಶಂಕರನಾರಾಯಣ್‌ರಾವ್ ಅವರ ಜನ್ಮ ದಿನಾಚರಣೆ

ದಿನಾಂಕ 29–10–2015 ರಂದು ಸಂಜೆ 4 ಗಂಟೆಗೆ ರಾಜ್ಯ ಕೇಂದ್ರ ಕಾರ್ಯಾಲಯದಲ್ಲಿ ದಿ|| ಜಸ್ಟೀಸ್ ಕೆ. ಶಂಕರನಾರಾಯಣರಾವ್ ರವರ ಜನ್ಮ ದಿನಾಚರಣೆಯನ್ನು ಏರ್ಪಡಿಸಲಾಗಿತ್ತು. ಶ್ರೀ ಚಿನ್ನಸ್ವಾಮಿ ರೆಡ್ಡಿ, ಜಂಟಿ ರಾಜ್ಯ ಕಾರ್ಯದರ್ಶಿ(ಸ್ಕೌಟ್ಸ್) ರವರು ಸರ್ವರನ್ನು ಸ್ವಾಗತಿಸಿದರು. ನಂತರ ದಿ|| ಜಸ್ಟೀಸ್ ಕೆ. ಶಂಕರನಾರಾಯಣ್ ರಾವ್ ರವರ ಭಾವಚಿತ್ರಕ್ಕೆ ಅವರ ಮೊಮ್ಮಗ ಶ್ರೀ ಸುಭಾಷ್, ಶ್ರೀಮತಿ ವಿದ್ಯಾ ಸುಭಾಷ್, ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ಹಾಗೂ ರಾಜ್ಯ ಸಂಸ್ಥೆಯ ಪದಾಧಿಕಾರಿಗಳು ಪುಷ್ಪವನ್ನು ಅರ್ಪಿಸಿದರು. ನಂತರ ಶ್ರೀ ಸುಭಾಷ್ ಮತ್ತು ಶ್ರೀಮತಿ ವಿದ್ಯಾ ಸುಭಾಷ್ ರವರನ್ನು ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರು ಸನ್ಮಾನಿಸಿದರು. ಶ್ರೀಮತಿ ಮಂಜುಳಾ ರಾಜ್ಯ ಸಂಘಟನಾ ಆಯುಕ್ತರು(ಗೈಡ್ಸ್) ರವರು ದಿ|| ಜಸ್ಟೀಸ್. ಕೆ. ಶಂಕರನಾರಾಯಣರಾವ್ ರವರ ಬಗ್ಗೆ ಮಾತನಾಡಿದರು. ನಂತರ ಶ್ರೀ ಸುಭಾಷ್ ರವರು ಮಾತನಾಡುತ್ತಾ ಶಿವಮೊಗ್ಗ ನಗರದಲ್ಲಿ ನಡೆದ ರಾಜ್ಯ ಮಟ್ಟದ ಮುಕ್ತದಳ ರ್‍ಯಾಲಿಯಲ್ಲಿ ಭಾಗವಹಿಸಿದ ಸಿಹಿ ಅನುಭವವನ್ನು ಮೆಲುಕು ಹಾಕಿದರು.

ಶ್ರೀ ಎಂ.ಎ. ಖಾಲಿದ್ ರಾಜ್ಯ ಆಯುಕ್ತರು (ಸ್ಕೌಟ್ಸ್) ರವರು ಮಾತನಾಡುತ್ತಾ ದಿ|| ಜಸ್ಟೀಸ್ ಕೆ. ಶಂಕರನಾರಾಯಣ್ ರಾವ್ ರವರು ಮೈಸೂರು ರಾಜ್ಯದ ಮೊದಲನೇ ರಾಜ್ಯ ಮುಖ್ಯ ಆಯುಕ್ತರಾಗಿ ಸೇವೆ ಸಲ್ಲಿಸಿದ ಬಗ್ಗೆ ಸ್ಮರಿಸಿಕೊಂಡರು.

ಶ್ರೀಮತಿ ಗೀತಾ ನಟರಾಜ್, ರಾಜ್ಯ ಆಯುಕ್ತರು (ಗೈಡ್ಸ್) ರವರು ಮಾತನಾಡುತ್ತಾ ಶ್ರೀ ಸುಭಾಷ್ ಹಾಗು ವಿದ್ಯಾ ಸುಭಾಷ್ ರವರನ್ನು ನಮ್ಮ ರಾಜ್ಯ ಸಂಸ್ಥೆಯಲ್ಲಿ ಸ್ವಯಂ ಸೇವಕರಾಗಿ ಸೇವೆ ಸಲ್ಲಿಸಲು ವಿನಂತಿಸಿದರು.

ಡಾ|| ಭಾಗ್ಯಲಕ್ಷ್ಮಿ, ಸಹಾಯಕ ರಾಜ್ಯ ಆಯುಕ್ತರು (ಗೈಡ್ಸ್) ರವರು ಮಾತನಾಡುತ್ತಾ ನನಗೆ ಈ ದಿನ ಸಂತೋಷವಾಗುತ್ತದೆ. ಇಂಥಹ ಮಹನೀಯರ ಜನ್ಮ ದಿನಾಚರಣೆಯಲ್ಲಿ ಭಾಗವಹಿಸುತ್ತಿರುವುದು ಹೆಮ್ಮೆಯ ವಿಷಯ ಎಂದರು.

ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರು ಮಾತನಾಡುತ್ತಾ ದಿ|| ಜಸ್ಟೀಸ್ ಕೆ. ಶಂಕರನಾರಾಯಣ್‌ರಾವ್ ರವರು ಅಪೆಕ್ಸ್ ಬ್ಯಾಂಕಿನ ಅಧ್ಯಕ್ಷರಾಗಿ, ಹಿರಿಯ ವಕೀಲರಾಗಿ, ಹೈಕೋರ್ಟ ನ್ಯಾಯಾಧೀಶರಾಗಿ ಕೆಲಸಮಾಡಿದ್ದನ್ನು ಸ್ಮರಿಸಿಕೊಂಡರು.

ಕೊನೆಯಲ್ಲಿ ಶ್ರೀ ಟಿ.ಎ. ಮಂಜುನಾಥಾಚಾರ್, ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್ಸ್) ರವರು ವಂದನಾರ್ಪಣೆ ಸಲ್ಲಿಸಿದರು. ಶ್ರೀ ಎಲ್.ಟಿ.ಲೋಕೇಶ್, ರಾ.ತ.ಆ. (ಸ್ಕೌ) ರವರು ನಿರೂಪಿಸಿದರು.

## ದಿ|| ಪ್ರೊ. ಪಿ. ಶಿವಶಂಕರ್ ಅವರ ಜನ್ಮ ದಿನಾಚರಣೆ

ದಿನಾಂಕ : 5-11-2015ರಂದು ರಾಜ್ಯ ಕೇಂದ್ರ ಕಾರ್ಯಾಲಯದಲ್ಲಿ ಪ್ರೊ. ಪಿ. ಶಿವಶಂಕರ್ ಅವರ ಜನ್ಮ ದಿನಾಚರಣೆಯನ್ನು ಏರ್ಪಡಿಸಲಾಗಿತ್ತು. ಶ್ರೀ ಚಿನ್ನಸ್ವಾಮಿ ರೆಡ್ಡಿ, ಜಂಟಿ ರಾಜ್ಯ ಕಾರ್ಯದರ್ಶಿ (ಸ್ಕೌಟ್ಸ್)ರವರು ಸರ್ವರನ್ನು ಸ್ವಾಗತಿಸಿದರು. ನಂತರ ಪ್ರೊ. ಪಿ. ಶಿವಶಂಕರ್ ಅವರ ಮಗ ಪ್ರೊ. ಎಸ್. ಉದಯಶಂಕರ್, ಅಧ್ಯಕ್ಷರು, ಶ್ರೀ ಜಗದ್ಗುರು ರೇಣುಕಾಚಾರ್ಯ ವಿದ್ಯಾ ಸಂಸ್ಥೆ, ಬೆಂಗಳೂರು, ಶ್ರೀಮತಿ ಭಾರತಿ ಜಿ. ಶಂಕರ್, ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಉಪಾಧ್ಯಕ್ಷರು, ರಾಜ್ಯ ಸಂಸ್ಥೆ ಇವರು ಪ್ರೊ. ಪಿ. ಶಿವಶಂಕರ್‌ರವರ ಭಾವಚಿತ್ರಕ್ಕೆ ಪುಷ್ಪ ನಮನ ಮಾಡಿದರು. ನಂತರ ಪ್ರೊ. ಉದಯಶಂಕರ್ ಅವರಿಗೆ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರು, ಶ್ರೀಮತಿ ಭಾರತಿ ಜಿ. ಶಂಕರ್‌ರವರಿಗೆ ಶ್ರೀಮತಿ ಸರೋಜ ವಿ. ನಾಯ್ಡುರವರು, ಶಾಲು ಹೊದಿಸಿ, ಹೂಗುಚ್ಚ ನೀಡಿ ಸನ್ಮಾನಿಸಿದರು.

ನಂತರ ಶ್ರೀಮತಿ ಸರೋಜ ವಿ. ನಾಯ್ಡುರವರು ಪ್ರೊ. ಪಿ. ಶಿವಶಂಕರ್‌ರವರ ಸಮಾಜ ಸೇವೆ ಸ್ಕೌಟಿಂಗ್‌ನಲ್ಲಿ ಸಲ್ಲಿಸಿದ ಆಮೋಘ ಸೇವೆಯನ್ನು ಸ್ಮರಿಸಿದರು. ಪ್ರೊ. ಎಸ್. ಉದಯಶಂಕರ್‌ರವರು ಹಿಂದೆ ರೋವರ್ ಆಗಿ, 1962ರಲ್ಲಿ ಸಿಲೋನ್ ಜಾಂಬೂರಿಯಲ್ಲಿ ಭಾಗವಹಿಸಿದ್ದ ನೆನಪುಗಳನ್ನು ಮಾಡಿದರು. ಶ್ರೀಮತಿ ಭಾರತಿ ಜಿ. ಶಂಕರ್‌ರವರು ಅವರ ಮಾವ ದಿ|| ಪ್ರೊ. ಪಿ. ಶಿವಶಂಕರ್‌ರವರ ಜೀವನ ಒಂದು ಶಿಸ್ತಿನಿಂದ ಕೂಡಿತ್ತು ಅವರಂತೆ ನಾನು ಅವರ ಮನೆಯ ಸೊಸೆಯಾಗಿ ಅವರ ಹೆಸರನ್ನು ಉಳಿಸಲು ಪ್ರಯತ್ನಿಸುತ್ತಿದ್ದೇನೆಂದರು. ಅಧ್ಯಕ್ಷತೆ ವಹಿಸಿದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಉಪಾಧ್ಯಕ್ಷರು, ರಾಜ್ಯ ಮತ್ತು ರಾಷ್ಟ್ರ ಸಂಸ್ಥೆ ಇವರು ಮಾತನಾಡುತ್ತಾ ಪ್ರೊ. ಪಿ. ಶಿವಶಂಕರ್‌ರವರ ಸ್ಕೌಟಿಂಗ್‌ನಲ್ಲಿ ಮಾಡಿದ ಸೇವೆಯಲ್ಲಿ ಸ್ಮರಿಸಿದರು.

"ಗಮನಿಸಿ" **"ಗಮನಿಸಿ"** "ಗಮನಿಸಿ"

**ಸ್ಕೌಟರ್-ಗೈಡರ್, ಕಬ್ಸ್-ಬುಲ್‌ಬುಲ್ಸ್, ಸ್ಕೌಟ್ಸ್-ಗೈಡ್ಸ್, ರೋವರ್- ರೇಂಜರ್‌ಗಳಿಂದ ಉತ್ತಮ ಹಾಗೂ ಉಪಯುಕ್ತ ಲೇಖನಗಳು, ಕವನಗಳು ಮತ್ತು ಚುಟುಕಗಳನ್ನು ಆಹ್ವಾನಿಸಲಾಗಿದೆ. ಸೂಕ್ತವಾದವುಗಳನ್ನು ಸ್ಕೌಟ್-ಗೈಡ್ ಮಾಸಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.**

**- ರಾಜ್ಯ ಕಾರ್ಯದರ್ಶಿ**

# ಸಂಸ್ಥಾಪನಾ ದಿನಾಚರಣೆ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ರಾಜ್ಯ ಸಂಸ್ಥೆಯ ಆಶ್ರಯದಲ್ಲಿ ದಿನಾಂಕ:07.11.2015 ರಂದು ಸಂಸ್ಥಾಪನಾ ದಿನಾಚರಣೆಯನ್ನು ಆಚರಿಸಲಾಯಿತು.

ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಉಪಾಧ್ಯಕ್ಷರು, ರಾಜ್ಯ ಸಂಸ್ಥೆ ಇವರ ನೇತೃತ್ವದಲ್ಲಿ ಶ್ರೀ ವಾಜುಭಾಯಿ ರೂಡಾಭಾಯಿ ವಾಲಾ, ಗೌರವಾನಿತ್ವ ರಾಜ್ಯಪಾಲರು ಕರ್ನಾಟಕ ಸರ್ಕಾರ ಮತ್ತು ಪೋಷಕರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರವರನ್ನು ಭೇಟಿಮಾಡಿ ಧ್ವಜ ಚೀಟಿಗಳನ್ನು ರಾಜಭವನದಲ್ಲಿ ಬಿಡುಗಡೆ ಮಾಡಲಾಯಿತು. ಈ ಸಂದಂರ್ಭದಲ್ಲಿ ಶ್ರೀಮತಿ ಗೀತಾ ನಟರಾಜ್, ರಾಜ್ಯ ಆಯುಕ್ತರು (ಗೈಡ್ಸ್), ಶ್ರೀ ಚೆನ್ನಸ್ವಾಮಿ ರೆಡ್ಡಿ, ಜಂಟಿ ರಾಜ್ಯ ಕಾರ್ಯದರ್ಶಿ, ಶ್ರೀ ಟಿ.ಎ. ಮಂಜುನಾಥಾಚಾರ್, ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್ಸ್) ಶ್ರೀಮತಿ ಕೆ.ವಿ. ಶಾಮಲ, ರಾಜ್ಯ ತರಬೇತಿ ಆಯುಕ್ತರು(ಗೈಡ್ಸ್) ರವರು ಉಪಸ್ಥಿತರಿದ್ದರು, ಗೌರವಾನಿತ್ವ ರಾಜ್ಯಪಾಲರು ಧ್ವಜಗಳನ್ನು ಬಿಡುಗಡೆ ಮಾಡಿ ಸ್ಕೌಟಿಂಗ್-ಗೈಡಿಂಗ್ ಬಗ್ಗೆ ಮಾತನಾಡಿದರು.

ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರ ನೇತೃತ್ವದಲ್ಲಿ ಶ್ರೀ ಸಿದ್ದರಾಮಯ್ಯ, ಮಾನ್ಯ ಮುಖ್ಯ ಮಂತ್ರಿಗಳು, ಮತ್ತು ಅಧ್ಯಕ್ಷರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಇವರನ್ನು ಭೇಟಿಮಾಡಿ ಧ್ವಜಚೀಟಿಗಳನ್ನು ಬಿಡುಗಡೆ ಮಾಡಲಾಯಿತು. ಶ್ರೀ ಜಿ. ಪರಮೇಶ್ವರ್, ಮಾನ್ಯ ಗೃಹ ಮಂತ್ರಿಗಳು ಸಹ ಈ ಸಮಾರಂಭದಲ್ಲಿ ಭಾಗವಹಿಸಿದ್ದರು. ಶ್ರೀ ಸಿದ್ಧಯ್ಯ, ರಾಜ್ಯ ಕಾರ್ಯದರ್ಶಿ, ಶ್ರೀಮತಿ ಸರೋಜಾ ವಿ. ನಾಯ್ಡು, ಉಪಾಧ್ಯಕ್ಷರು, ರಾಜ್ಯ ಸಂಸ್ಥೆ, ಶ್ರೀ.ಡಿ.ವೆಂಕಟೇಶ್, ಸಹಾಯಕ ರಾಜ್ಯ ಆಯುಕ್ತರು, ಶ್ರೀ.ಅನಿಲ್ ಕುಮಾರ್,ಆಜೀವ ಸದಸ್ಯರು, ರಾಜ್ಯ ಸಂಸ್ಥೆ, ಶ್ರೀಮತಿ ಸಿ. ಮಂಜುಳಾ, ರಾಜ್ಯ ಸಂಘಟನಾ ಆಯುಕ್ತರು (ಗೈಡ್), ಶ್ರೀ ಎಲ್.ಟಿ. ಲೋಕೇಶ್, ರಾಜ್ಯ ತರಬೇತಿ ಆಯುಕ್ತರು (ಸ್ಕೌಟ್), ಕುಮಾರಿ ಮೇಘನಾ, ರೇಂಜರ್, ಸರ್ಕಾರಿ ಗೃಹ ವಿಜ್ಞಾನ ಕಾಲೇಜಿನ ರೇಂಜರ್ಸ್ ಗಳು, ಮತ್ತು ಸರ್ಕಾರಿ ವಿಜ್ಞಾನ ಕಾಲೇಜಿನ ರೋವರ್ಸ್ ಗಳು ಈ ಸಂದರ್ಭದಲ್ಲಿ ಹಾಜರಿದ್ದರು.

ಶ್ರೀ ಕೆ.ಜೆ. ಜಾರ್ಜ್, ಮಾನ್ಯ ಬೆಂಗಳೂರು ಅಭಿವೃದ್ಧಿ ಸಚಿವರು ಮತ್ತು ಬೆಂಗಳೂರು ನಗರ ಸಚಿವರು ವಿಧಾನಸೌಧದಲ್ಲಿ ಧ್ವಜಚೀಟಿಗಳನ್ನು ಬಿಡುಗಡೆ ಮಾಡಿದರು. ಶ್ರೀ ಕೌಶಿಕ್ ಮುಖರ್ಜಿ, ಮುಖ್ಯ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ ಮತ್ತು ಶ್ರೀ ಐ.ಎನ್.ಎಸ್. ಪ್ರಸಾದ್, ಪ್ರಧಾನ ಕಾರ್ಯದರ್ಶಿಗಳು (ಹಣಕಾಸು) ಕರ್ನಾಟಕ ಸರ್ಕಾರ ಇವರುಗಳು ವಿಧಾನಸೌಧ ಕಛೇರಿಗಳಲ್ಲಿ ಧ್ವಜಚೀಟಿ ಬಿಡುಗಡೆ ಮಾಡಿದರು.

ಶ್ರೀ ಎನ್.ಎಸ್. ಮೆಘರಿಕ್, ಭಾ.ಪೊ.ಸೇ. ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಶ್ರೀ.ಕೆ.ಎಸ್.ಸತ್ಯಮೂರ್ತಿ, ಭಾ.ಆ.ಸೇ, ಆಯುಕ್ತರು, ಸಾರ್ವಜನಿಕ ಶಿಕ್ಷಣಾ ಇಲಾಖೆ, ಕರ್ನಾಟಕ ಸರ್ಕಾರ. ಶ್ರೀಮತಿ ಫಿಲೋಮಿನಾ ಲೋಬೋ, ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ (ಪ್ರೌಢ ಶಿಕ್ಷಣ), ಶ್ರೀ ಕೆ. ಆನಂದ್, ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ (ಪ್ರಾಥಮಿಕ ಶಿಕ್ಷಣ) ಇವರುಗಳ ಕಛೇರಿಗಳಲ್ಲಿ ಧ್ವಜಚೀಟಿ ಬಿಡುಗಡೆಗೊಳಿಸಲಾಯಿತು.

ಸಂಜೆ ರಾಜ್ಯ ಕೇಂದ್ರ ಕಛೇರಿಯಲ್ಲಿ ಶ್ರೀ ಯು.ಟಿ. ಖಾದರ್, ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು ಆಗಮಿಸಿ ಧ್ವಜ ಚೀಟಿಗಳನ್ನು ಬಿಡುಗಡೆಗೊಳಿಸಿ ತಮ್ಮ ಚಿಕ್ಕ ವಯಸ್ಸಿನ ಸ್ಕೌಟಿಂಗ್ ಅನುಭವಗಳನ್ನು ಹಂಚಿಕೊಂಡರು,

ಈ ಸಂದಂರ್ಭದಲ್ಲಿ ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು, ಸಂಸ್ಥಾಪನಾ ದಿನಾಚರಣೆ, ಧ್ವಜ ಚೀಟಿಗಳ ಬಗ್ಗೆ ಮಾತನಾಡಿದರು, ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಉಪಾಧ್ಯಕ್ಷರು, ರಾಜ್ಯ ಸಂಸ್ಥೆ, ಜಂಟಿ ರಾಜ್ಯ ಕಾರ್ಯದರ್ಶಿಗಳಾದ ಶ್ರೀ ಚೆನ್ನಸ್ವಾಮಿ ರೆಡ್ಡಿ, ಶ್ರೀಮತಿ ಎಸ್.ಕೆ. ಪ್ರಭಾ ಮತ್ತು ರಾಜ್ಯ ಸಂಸ್ಥೆಯ ಪದಾಧಿಕಾರಿಗಳು ಉಪಸ್ಥಿತರಿದ್ದರು.

# ರಾಜ್ಯ ಮಟ್ಟದ ತರಬೇತಿ ಶಿಬಿರಗಳು

**ಸ್ಕೌಟ್ಸ್ / ಗೈಡ್ಸ್‌ಗಳಿಗೆ ತೃತೀಯ ಸೋಪಾನ ಪದಕ ತರಬೇತಿ ಶಿಬಿರ**
**ದಳ ನಿರ್ವಹಣೆ ತರಬೇತಿ ಶಿಬಿರ ಮತ್ತು ರೋವರ್‌ಗಳ ನಿಪುಣ್ ಪದಕ ತರಬೇತಿ ಶಿಬಿರ**

ದಿನಾಂಕ: 14.11.2015 ರಿಂದ 18.11.2015ರ ವರೆಗೆ ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ಕೊಂಡಜ್ಜಿ, ಹರಿಹರ ತಾಲ್ಲೂಕು, ದಾವಣಗೆರೆ ಜಿಲ್ಲೆಯಲ್ಲಿ ಮೇಲ್ಕಂಡ ಶಿಬಿರಗಳನ್ನು ಏರ್ಪಡಿಸಲಾಗಿತ್ತು. ತೃತೀಯ ಸೋಪಾನ ಶಿಬಿರದಲ್ಲಿ ರಾಜ್ಯದ 15 ಜಿಲ್ಲೆಗಳಿಂದ 102 ಸ್ಕೌಟ್ಸ್‌ಗಳು, 18 ಸ್ಕೌಟರ್ಸ್ ಹಾಗೂ 6 ಸಿಬ್ಬಂದಿಗಳು ಮತ್ತು 11 ಜಿಲ್ಲೆಗಳಿಂದ 140 ಗೈಡ್ಸ್ 15 ಗೈಡರ್ಸ್ ಹಾಗೂ 12 ಸಿಬ್ಬಂದಿಗಳು ಭಾಗವಹಿಸಿದ್ದರು. ಶ್ರೀ ಬಿ. ಷರಾಫ್ ಮಾದಪ್ಪ ಎಲ್.ಟಿ. (ಸ್ಕೌಟ್ಸ್) ಸ್ಕೌಟ್ ಶಿಬಿರ ನಾಯಕರಾಗಿ ಮತ್ತು ದ್ರಾಕ್ಷಾಯಿಣಿ ಗೈಡ್ ಶಿಬಿರ ನಾಯಕಿಯಾಗಿ, ರಾಜ್ಯ ಸಂಘಟನಾ ಆಯುಕ್ತರುಗಳಾದ ಶ್ರೀ ಟಿ.ಎ. ಮಂಜುನಾಥಾಚಾರ್ ಮತ್ತು ಶ್ರೀಮತಿ ಸಿ. ಮಂಜುಳಾ ಶಿಬಿರಗಳ ಮೇಲು ಉಸ್ತುವಾರಿ ವಹಿಸಿದ್ದರು.

ದಳ ನಿರ್ವಹಣಾ ಶಿಬಿರದಲ್ಲಿ 97 ಸ್ಕೌಟ್‌ರ್‌ಗಳು ಭಾಗವಹಿಸಿದ್ದರು. ಶ್ರೀ ಡಿ. ಬಸವರಾಜ್, ಎಲ್.ಟಿ. (ಸ್ಕೌಟ್), ಈ ಶಿಬಿರದ ನಾಯಕರಾಗಿದ್ದರು. ರೋವರ್ ಶಿಬಿರದಲ್ಲಿ 25 ರೋವರ್‌ಗಳು ಭಾಗವಹಿಸಿದ್ದರು. ಶ್ರೀ ಎ.ವಿ. ರಾಜೇಶ್, ಶಿವಮೊಗ್ಗ ಈ ಶಿಬಿರದ ನಾಯಕರಾಗಿದ್ದರು.

ದಿನಾಂಕ:14.11.2015 ರಂದು ಬೆಳಗ್ಗೆ 9 ಗಂಟೆಗೆ ದಿ॥ ಕೊಂಡಜ್ಜಿ ಬಸಪ್ಪ ನವರ 33ನೇ ಪುಣ್ಯ ತಿಥಿಯ ನಿಮಿತ್ಯ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಉಪಾಧ್ಯಕ್ಷರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಇವರ ನೇತೃತ್ವದಲ್ಲಿ ಸರ್ವಧರ್ಮ ಪ್ರಾರ್ಥನೆಯನ್ನು ಏರ್ಪಡಿಸಲಾಗಿತ್ತು. ಸಂಜೆ–6.00 ಗಂಟೆಗೆ ಶ್ರೀ ಮುರುಘರಾಜೇಂದ್ರ ಚಿಗಟೇರಿ, ಜಿಲ್ಲಾ ಮುಖ್ಯ ಆಯುಕ್ತರು, ದಾವಣಗೆರೆ ಇವರ ಅಧ್ಯಕ್ಷತೆಯಲ್ಲಿ ಉದ್ಘಾಟನಾ ಸಮಾರಂಭವನ್ನು ಏರ್ಪಡಿಸಲಾಗಿತ್ತು. ಹರಿಹರ ವಿಧಾನ ಸಭಾ ಕ್ಷೇತ್ರದ ಶಾಸಕರಾದ ಶ್ರೀ ಹೆಚ್.ಎಸ್. ಶಿವಶಂಕರ್, ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯರವರು ದೀಪ ಬೆಳಗಿಸುವ ಮೂಲಕ ಶಿಬಿರಗಳನ್ನು ಉದ್ಘಾಟಿಸಿ ಮಕ್ಕಳನ್ನುದ್ದೇಶಿಸಿ ಮಾತನಾಡಿದರು. ಸಮಾರಂಭದಲ್ಲಿ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಉಪಾಧ್ಯಕ್ಷರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ, ಶ್ರೀಮತಿ ವಿಶಾಲಾಕ್ಷಮ್ಮ, ಕೋಂ. ಕೆ.ಜಿ. ನಾರಪ್ಪ, ಅಧ್ಯಕ್ಷರು, ಕೊಂಡಜ್ಜಿ ಗ್ರಾಮ ಪಂಚಾಯತ್, ಕೊಂಡಜ್ಜಿ, ಶ್ರೀ ಮೋಹನ್ ಕುಮಾರ್ ಕೊಂಡಜ್ಜಿ, ರಾಜ್ಯ ಕೇಂದ್ರ ಸ್ಥಾನಿಕ ಆಯುಕ್ತರು ಮತ್ತು ದಾವಣಗೆರೆ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು, ಕೊಂಡಜ್ಜಿ ಗ್ರಾಮದ ಭಜನಾ ಮಂಡಳಿಯ ಸದಸ್ಯರು, ರಾಜ್ಯ ಸಂಸ್ಥೆಯ ಪದಾಧಿಕಾರಿಗಳು ಉಪಸ್ಥಿತರಿದ್ದರು ಇದೇ ಸಂದರ್ಭದಲ್ಲಿ ರಾಜ್ಯ ಸಂಸ್ಥೆಯ ಅಂತರ್ಜಾಲತಾಣವನ್ನು ಅಧಿಕೃತವಾಗಿ ಉದ್ಘಾಟಿಸಲಾಯಿತು, ಸಮಾರಂಭದಲ್ಲಿ ಶ್ರೀ ಗುರುರಾಜ್, ಶ್ರೀ ಚಂದ್ರಶೇಖರ್ ಶ್ರೀ ಕೃಷ್ಣಪ್ರಸಾದ್, ಪಿ.ಎನ್. ಅವರುಗಳನ್ನು ರಾಜ್ಯ ಮುಖ್ಯ ಆಯಕ್ತರು ಅಭಿನಂದಿಸಿದರು.



**3 Golden Rules!!**
**Who is Helping You, Dont Forget Them.**
**Who is Loving You, Dont Hate Them.**
**Who is Trusting you, Dont Cheat Them.**

# ಜಿಲ್ಲಾ ವಾರ್ತೆಗಳು

## ಬೆಳಗಾವಿ

ದಿನಾಂಕ 12-09-2015 ರಂದು ಶೈಕ್ಷಣಿಕ ಜಿಲ್ಲೆ ಚಿಕ್ಕೋಡಿಯ ಆರ್.ಡಿ. ಪ್ರೌಢಶಾಲೆಯಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆ ವತಿಯಿಂದ ಆಯೋಜಿಸಿದ ಜಿಲ್ಲಾ ಮಟ್ಟದ ಶಿಕ್ಷಕರ ದಿನಾಚರಣೆಯಲ್ಲಿ ಶಿಕ್ಷಕರ ಸಂಘದ ವತಿಯಿಂದ ಕೊಡಮಾಡಿದ ಜಿಲ್ಲಾ ಉತ್ತಮ ಸ್ಕೌಟ್ ಮಾಸ್ಟರ್ ಮತ್ತು ಗೈಡ್ ಕ್ಯಾಪ್ಟನ್ ಪ್ರಶಸ್ತಿ ಹಾಗೂ ಫಲಕವನ್ನು ಶ್ರೀ ಆರ್.ಆರ್. ಅಲಕುಂಟೆ, ಸ್ಕೌಟ್ ಮಾಸ್ಟರ್, ಎಸ್.ಎ.ಎಸ್. ಪ್ರೌಢಶಾಲೆ ಐಗಳಿ ಹಾಗೂ ಶ್ರೀಮತಿ ಎಲ್.ಎಸ್. ಬಹಾದ್ದೂರಿ, ಗೈಡ್ ಕ್ಯಾಪ್ಟನ್ ಸರಕಾರಿ ಪ್ರೌಢಶಾಲೆ ನೇರ್ಲಿ ಇವರುಗಳಿಗೆ ನೀಡಲಾಯಿತು. ಪ್ರಾಚಾರ್ಯರಾದ ಶ್ರೀ ಎ.ಬಿ. ಪಾಟೀಲ ಹಾಗೂ ರೋವರ್ ಸ್ಕೌಟ್ ಲೀಡರ್ ಶ್ರೀ ಎಸ್.ಟಿ. ಪಾಟೀಲ ಮತ್ತು ಅಧ್ಯಾಪಕ ವೃಂದದವರು ಪಾಲ್ಗೊಂಡಿದ್ದರು.

* ದಿನಾಂಕ 02-10-2015 ರಂದು ಗಾಂಧಿ ಜಯಂತಿ ಅಂಗವಾಗಿ ಕೆ.ಎಲ್.ಇ. ಶಾಲೆ ಗೋಕಾಕ ಇಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಂದ ಸರ್ವಧರ್ಮ ಪ್ರಾರ್ಥನಾ ಕಾರ್ಯಕ್ರಮ ಜರುಗಿತು. ಕಾರ್ಯಕ್ರಮದ ನೇತೃತ್ವವನ್ನು ಶ್ರೀ ಪಿ. ವೈ. ಪಾಟೀಲ ಸ್ಕೌಟ್ ಮಾಸ್ಟರ್ ವಹಿಸಿದ್ದರು. ಗೈಡ್ ಕ್ಯಾಪ್ಟನ್ ಶ್ರೀಮತಿ ಎಸ್.ಟಿ. ತೊಂಡಿಕಟ್ಟೆ, ಫ್ಲಾಕ್ ಲೀಡರ್ ಶ್ರೀಮತಿ ಪ್ರತಿಭಾ ಜಾದವ, ಕಬ್ ಮಾಸ್ಟರ್ ಶ್ರೀಮತಿ ಚೇತನಾ ಪಾಟೀಲ ಹಾಗೂ ಪ್ರಾಚಾರ್ಯರಾದ ಶ್ರೀಮತಿ ಅನುಪಾ ಕೌಸಿಕ್ ಭಾಗವಹಿಸಿದ್ದರು. ಸರ್ವಧರ್ಮ ಪ್ರಾರ್ಥನೆಯಲ್ಲಿ 100ಕ್ಕೂ ಹೆಚ್ಚು ಸ್ಕೌಟ್-ಗೈಡ್‌ಗಳು ಭಾಗವಹಿಸಿದ್ದರು.

* ದಿನಾಂಕ 16-10-2015 ರಂದು ಬೆಳಗಾವಿ ನಗರದ ಜೈನ್ ಹೆರಿಟೇಜ್ ಶಾಲೆಯ ಸ್ಕೌಟ್-ಗೈಡ್‌ಗಳು ನಗರದ ವೃದ್ಧಾಶ್ರಮಕ್ಕೆ ಭೇಟಿ ನೀಡಿ ವೃದ್ಧಾಶ್ರಮದ ಆವರಣವನ್ನು ಸ್ವಚ್ಛಗೊಳಿಸಿದರು. ಆಶ್ರಮದಲ್ಲಿ ಇರುವ ವೃದ್ಧರುಗಳಿಗೆ ಹಾಸಿಗೆ, ಹೊದಿಕೆ ಹಾಗು ಉಡುಗೊರೆಗಳನ್ನು ವಿತರಿಸಿದರು. ನಂತರ ಸ್ಕೌಟ್-ಗೈಡ್‌ಗಳು ವೃದ್ಧರೊಂದಿಗೆ ಮಾತೃವಾತ್ಸಲ್ಯ ಮತ್ತು ಪಿತೃ ವಾತ್ಸಲ್ಯದ ಕುರಿತು ಸಂವಾದವನ್ನು ನಡೆಸಿದರು. ಸದರಿ ಕಾರ್ಯಕ್ರಮವು ಜಿಲ್ಲಾ ಸಂಸ್ಥೆಯ ಸಹಕಾರದೊಂದಿಗೆ ನಡೆಯಿತು. ಈ ಕಾರ್ಯಕ್ರಮದಲ್ಲಿ ಜೈನ್ ಹೆರಿಟೇಜ್ ಶಾಲೆಯ ಸ್ಕೌಟ್ ಮಾಸ್ಟರ್, ಗೈಡ್ ಕ್ಯಾಪ್ಟನ್ ಮತ್ತು ಕಬ್ ಮಾಸ್ಟರ್, ಫ್ಲಾಕ್ ಲೀಡರ್ ಹಾಗೂ ಶಾಲೆಯ ಆಡಳಿತ ಮಂಡಳಿಯ ಪದಾಧಿಕಾರಿಗಳು ಕೂಡಾ ಪಾಲ್ಗೊಂಡಿದ್ದರು. 64 ಸ್ಕೌಟ್-ಗೈಡ್‌ಗಳು ಭಾಗವಹಿಸಿದ್ದರು.

* ದಿನಾಂಕ 02-10-2015 ರಂದು ಜಿಲ್ಲಾ ಸ್ಕೌಟ್ ಭವನದಲ್ಲಿ ಗಾಂಧೀಜಿ ಮತ್ತು ಲಾಲ್ ಬಹದ್ದೂರ ಶಾಸ್ತ್ರಿಯವರ ಜಯಂತಿಯ ಅಂಗವಾಗಿ ಭಾವಚಿತ್ರಕ್ಕೆ ಜಿಲ್ಲಾ ಮುಖ್ಯ ಆಯುಕ್ತರು ಹಾಗೂ ಜಿಲ್ಲಾ ಪದಾಧಿಕಾರಿಗಳು ಪುಷ್ಪಾರ್ಚನೆಯನ್ನು ಸಲ್ಲಿಸಿದರು. ಕಾರ್ಯಕ್ರಮದಲ್ಲಿ ಸ್ಥಳೀಯ ಶಾಲೆಯ 150 ಸ್ಕೌಟ್-ಗೈಡ್‌ಗಳು ಭಾಗವಹಿಸಿದ್ದರು. ಕೊನೆಯಲ್ಲಿ ಜಿಲ್ಲಾ ಮುಖ್ಯ ಆಯುಕ್ತರು ಸಿಹಿಯನ್ನು ಹಂಚಿದರು.

## ಬೆಂಗಳೂರು ದಕ್ಷಿಣ

ದಿನಾಂಕ 02-10-2015 ರಂದು ಮಹಾತ್ಮಾ ಗಾಂಧೀ ಜಯಂತಿಯನ್ನು ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಬೆಂಗಳೂರು ನಗರ ಜಿಲ್ಲೆ, ರಾಜರಾಜೇಶ್ವರಿನಗರ, ಬೆಂಗಳೂರಿನಲ್ಲಿ ಆಚರಿಸಲಾಯಿತು. ಸ್ವರ್ಗರಾಣಿ ಪ್ರೌಢಶಾಲೆ, ರಾಜರಾಜೇಶ್ವರಿ ನಗರ ಹಾಗು ಶ್ರೀ ಜ್ಞಾನಾಕ್ಷಿ ಪ್ರೌಢಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳು ಮತ್ತು ಶಿಕ್ಷಕರು, ಜಿಲ್ಲಾ ಸಂಸ್ಥೆಯ ಕಾರ್ಯದರ್ಶಿಗಳು ಸಮಾರಂಭದಲ್ಲಿ ಭಾಗವಹಿಸಿದ್ದರು. ಸಮಾರಂಭದ ಅಧ್ಯಕ್ಷತೆಯನ್ನು ಡಯಟ್ ನ ಪ್ರಾಂಶುಪಾಲರು ಹಾಗು ಉಪನಿರ್ದೇಶಕರಾದ (ಅಭಿವೃದ್ಧಿ) ಶ್ರೀಮತಿ ಟಿ.ಎನ್. ಗಾಯತ್ರಿದೇವಿಯವರು ವಹಿಸಿ ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಮಹಾತ್ಮಾ ಗಾಂಧೀ ಯವರ ಜೀವನದಲ್ಲಿ ಹಾಗೂ ಸ್ವಾತಂತ್ರ್ಯಕ್ಕಾಗಿ ಅವರು ಅಹಿಂಸಾ ಮಾರ್ಗವನ್ನು,

ಚಳುವಳಿಯಲ್ಲಿ ತಮ್ಮ ಜೊತೆಗಾರರಿಂದ ಸ್ವಾತಂತ್ರ್ಯಕೊಡಿಸುವಲ್ಲಿ ಹೋರಾಟ ಮಾಡಿದ್ದನ್ನು ನೆನಪು ಮಾಡಿದರು. ಸಮಾರಂಭದಲ್ಲಿ ಡಯಟ್‌ನ ಅಧಿಕಾರಿಗಳು, ಸ್ಕೌಟ್ ಮಾಸ್ಟರರಾದ ಶ್ರೀ ಸತೀಶ್, ಶ್ರೀ ಚನ್ನಪ್ಪ ಭಾಗವಹಿಸಿದ್ದರು. ಪೂಜಾ ಕಾರ್ಯಕ್ರಮದ ನಂತರ ಶ್ರಮದಾನ ಕಾರ್ಯಕ್ರಮದಲ್ಲಿ ಎಲ್ಲರೂ ಪಾಲ್ಗೊಂಡು ಡಯಟ್ ಮೈದಾನವನ್ನು ಸ್ವಚ್ಛಮಾಡಿದರು.

* ಆನೇಕಲ್‌ನಲ್ಲಿ ಇತ್ತೀಚೆಗೆ ನಡೆದ ಸ್ಕೌಟ್-ಗೈಡ್ ಸಂಸ್ಥಾಪನಾ ದಿನಾಚರಣೆ ಹಾಗೂ ಧ್ವಜ ದಿನಾಚರಣೆ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿ, ಸ್ಕೌಟ್ಸ್-ಗೈಡ್ಸ್‌ನಿಂದ ಜೀವನ ಶಿಸ್ತು ಮೂಡುತ್ತದೆ ಎಂದು ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಡಿ.ಆರ್. ರಾಮಮೂರ್ತಿ ತಿಳಿಹೇಳಿದರು. ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಎ.ಎನ್. ನರೇಂದ್ರ ಕುಮಾರ್ ಮಾನಾಡಿ ಯುವ ಜನಾಂಗದ ಸಾಧನೆಗಾಗಿ ಅವರಲ್ಲಿರುವ ದೈಹಿಕ, ಬೌದ್ಧಿಕ, ಭಾವನಾತ್ಮಕ, ಸಾಮಾಜಿಕ ಮತ್ತು ಆಧ್ಯಾತ್ಮಿಕ ಅಂತಃ ಸತ್ವವನ್ನು ಪರಿಪೂರ್ಣವಾಗಿ ಅಭಿವೃದ್ಧಿಗೊಳಿಸಿ ಅವರನ್ನು ಸ್ಥಳೀಯ, ರಾಷ್ಟ್ರೀಯ ಹಾಗೂ ಜಾಗತಿಕ ಸಮುದಾಯದ ಸದಸ್ಯನನ್ನಾಗಿ ಮತ್ತು ಜವಾಬ್ದಾರಿಯುತ ಪ್ರಜೆಯನ್ನಾಗಿ ರೂಪಿಸುವುದೇ ಸ್ಕೌಟ್ ಸಂಸ್ಥೆಯ ಉದ್ದೇಶವಾಗಿದೆ ಎಂದರು. ಇದೇ ಸಂದರ್ಭದಲ್ಲಿ ತಾಲ್ಲೂಕು ಮಟ್ಟದ ದ್ವಿತೀಯ ಸೋಪಾನ ಸ್ಕೌಟ್, ಗೈಡ್ ಪರೀಕ್ಷಾ ಶಿಬಿರವನ್ನು ಸಹ ಏರ್ಪಡಿಸಲಾಗಿತ್ತು. ಸ್ಕೌಟ್-ಗೈಡ್‌ಗಳಿಗೆ ಲಿಖಿತ, ಪ್ರಾಯೋಗಿಕ ಮತ್ತು ಮೌಖಿಕ ಪರೀಕ್ಷೆಗಳನ್ನು ನಡೆಸಲಾಯಿತು. ಕ್ಷೇತ್ರ ಸಮನ್ವಯಾಧಿಕಾರಿ ಶ್ರೀ ಮುನಿವೆಂಕಟರಾಮಾಚಾರಿ, ದೈಹಿಕ ಶಿಕ್ಷಣ ಪರಿವೀಕ್ಷಕ ಶ್ರೀ ಯಲ್ಲಪ್ಪ, ಸರ್ಕಾರಿ ನೌಕರರ ಸಂಘದ ಅಧ್ಯಕ್ಷ ಶ್ರೀ ವಿ.ಕೆ. ಗವಿರಂಗಯ್ಯ, ಪ್ರಾಥಮಿಕ ಶಾಲಾ ಶಿಕ್ಷಕರ ಸಂಘದ ಅಧ್ಯಕ್ಷ ಶ್ರೀ ಕೆ. ಶಿವಣ್ಣ, ಕಾರ್ಯದರ್ಶಿ, ಶ್ರೀ ಲಕ್ಷ್ಮೀಕಾಂತ್, ಶಿಕ್ಷಣ ಸಂಯೋಜಕರಾದ ಶ್ರೀ ವಿ. ಪ್ರಕಾಶ್, ಶ್ರೀ ಅಮೀರ್ ಜಾನ್, ಶ್ರೀ ಸುರೇಶ್ಮ ಸರ್ಕಾರಿ ಬಾಲಕಿಯರ ಪ್ರೌಢಶಾಲೆಯ ಮುಖ್ಯೋಪಾಧ್ಯಾಯ ಶ್ರೀ ಶಂಕರಮೂರ್ತಿ, ಸ್ಕೌಟ್ ಸಂಸ್ಥೆಯ ಜಂಟೀ ಕಾರ್ಯದರ್ಶಿ ಶ್ರೀಮತಿ ಆರ್ ಸುಮ, ಭಗತ್ ಸಿಂಗ್ ರೋವರ್ ತಂಡದ ಶ್ರೀ ಎಂ. ಚಂದ್ರಶೇಖರ್, ಶ್ರೀ ವೈ. ಕಿರಣ್ ಕುಮಾರ್, ಶ್ರೀ ರಾಜಶೇಖರ್, ಶ್ಯಾಮಸುಂದರ್ ಮೊದಲಾದವರು ಉಪಸ್ಥಿತರಿದ್ದರು.

## ಚಾಮರಾಜನಗರ

ದಿನಾಂಕ 22-09-2015 ರಂದು ಕುಟುಂಬ ಜೀವನ ಶಿಕ್ಷಣ ಮತ್ತು ಸ್ವಚ್ಛ ಭಾರತ್ ಅಭಿಯಾನದ ಬಗ್ಗೆ ಜೆ.ಎಸ್.ಎಸ್. ಪ್ರಥಮ ದರ್ಜೆ ಕಾಲೇಜು, ಚಾಮರಾಜನಗರದ ರೇಂಜರ್ ಘಟಕದ ವತಿಯಿಂದ ಉಪನ್ಯಾಸ ಕಾರ್ಯಕ್ರಮ ಜರುಗಿತು. ಶ್ರೀ ವಿ.ಎಂ. ರಾಮಚಂದ್ರ, ಜಿಲ್ಲಾ ಕಾರ್ಯದರ್ಶಿ ಸ್ಕೌಟ್-ಗೈಡ್ ಬಗ್ಗೆ ಮಾಹಿತಿ ನೀಡಿದರು. ಮುಖ್ಯ ಅತಿಥಿಯಾಗಿ ಶ್ರೀ ಜಿ.ಆರ್. ಅಶ್ವಥ್‌ನಾರಾಯಣ್ ಡಿ.ಸಿ.ಇ., ಶ್ರೀ ವೈ ಮಲ್ಲಿಕಾರ್ಜುನಸ್ವಾಮಿ ಡಿ.ಸಿ.(ಎಸ್.) ಪ್ರೊ.ಎ.ಜಿ. ಶಿವಕುಮಾರ್ ಉಪಸ್ಥಿತರಿದ್ದರು. ಶ್ರೀಮತಿ ಜಗದಾಂಬ ಹೆಚ್.ವಿ. ಅಭಿವೃದ್ಧಿ ನಿರೀಕ್ಷಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಮತ್ತು ಶ್ರೀ ನಾಗರಾಜು ಇವರುಗಳು ಕುಟುಂಬ ಜೀವನ ಶಿಕ್ಷಣದ ಬಗ್ಗೆ ಉಪನ್ಯಾಸ ನೀಡಿದರು. ಪ್ರೊ. ನಾಗೇಂದ್ರ ಎಸ್. ಪ್ರಾಂಶುಪಾಲರು ಅಧ್ಯಕ್ಷತೆ ವಹಿಸಿದ್ದರು. ಶ್ರೀ ಅಶೋಕ್ ಡಿ.ಒ., ಶ್ರೀ ಹೆಚ್.ಸಿ. ನರಸಿಂಹಯ್ಯ, ಜಿಲ್ಲಾ ಸಹಾಯಕ ಕಾರ್ಯದರ್ಶಿ ಹಾಜರಿದ್ದರು. 250 ಸ್ಕೌಟ್ಸ್-ಗೈಡ್ಸ್‌ಗಳು ಹಾಜರಿದ್ದರು.

* ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್‌ನ ಸಭೆ, ಜೆ.ಹೆಚ್. ಪಟೇಲ್ ಸಭಾಂಗಣ, ಚಾಮರಾಜನಗರದಲ್ಲಿ ಜರುಗಿತು, ಈ ಪರಿಷತ್ ಸಭಾ ಕಾರ್ಯದಲ್ಲಿ ಸೇಂಟ್ ಜೋಸೆಫ್ ಶಾಲಾ ಸ್ಕೌಟ್ಸ್-ಗೈಡ್ಸ್‌ಗಳು ಆವರಣ ಸ್ವಚ್ಛತೆ, ಆಹಾರ ವಿತರಣೆ ಸೇವೆಯಲ್ಲಿ ಭಾಗವಹಿಸಿದ್ದರು. ಶ್ರೀ ಹೆಚ್.ಎಸ್. ಮಹಾದೇವ ಪ್ರಸಾದ್, ಜಿಲ್ಲಾ ಉಸ್ತುವಾರಿ ಸಚಿವರು ಹಾಗೂ ಶ್ರೀಶ್ರೀಶ್ರೀ ದೇಶಿಕೇಂದ್ರ ಸ್ವಾಮಿಗಳವರ ಸಾನ್ನಿಧ್ಯದಲ್ಲಿ ಕಾರ್ಯಕ್ರಮ ಜರುಗಿತು. ಶ್ರೀ ವಿ. ಮಲ್ಲಿಕಾರ್ಜುನ ಸ್ವಾಮಿ ಡಿ.ಸಿ.(ಎಸ್.) ಮತ್ತು ಶ್ರೀ ವಿ.ಎಂ. ರಾಮಚಂದ್ರ, ಜಿಲ್ಲಾ ಕಾರ್ಯದರ್ಶಿಗಳು ಭಾಗವಹಿಸಿದ್ದರು.

* ದಿನಾಂಕ 02-10-2015 ರಂದು ಸೆಂಟ್ ಜೋಸೆಫ್ ಶಾಲೆ, ಚಾಮರಾಜನಗರದಲ್ಲಿ ಮಹಾತ್ಮಾ ಗಾಂಧೀಜಿ ಜಯಂತಿ ಪ್ರಯುಕ್ತ ಸರ್ವಧರ್ಮ ಪ್ರಾರ್ಥನೆ ಜರುಗಿತು. ಸಿಸ್ಟರ್ ಸುಶೀಲಮ್ಮ ಹೆಚ್.ಎಂ. ಶ್ರೀಮತಿ ಸುಮ,

ಉಪಾಧ್ಯಾಯಿನಿ, ಹಾಜರಿದ್ದರು. ಅದೇ ದಿನ ಅನಾಥ ಮಕ್ಕಳಿಗೆ, ಆಸ್ಪತ್ರೆಗಳಲ್ಲಿ ಹಣ್ಣು ಹಂಚಲಾಯಿತು ಹಾಗು ಶಾಲಾ ಸ್ವಚ್ಛತೆ ಕಾರ್ಯಕ್ರಮ ನಡೆಸಿದರು. ಶ್ರೀವಿ.ಎಂ. ರಾಮಚಂದ್ರ, ಜಿಲ್ಲಾ ಕಾರ್ಯದರ್ಶಿ ಉಪಸ್ಥಿತರಿದ್ದರು.

* ದಿ॥ ಕೊಂಡಜ್ಜಿ ಬಸಪ್ಪನವರ ಸ್ಮರಣಾರ್ಥ ಚಾಮರಾಜನಗರ ಜಿಲ್ಲೆಯಿಂದ 4, ಮೈಸೂರು ಜಿಲ್ಲೆಯಿಂದ 7 ಪ್ರೀ ಎ.ಎಲ್.ಟಿ. ಮತ್ತು ಎ.ಎಲ್.ಟಿ. ತರಬೇತಿ ಹೊಂದಿದವರಿಗೆ ಕ್ವಿಜ್ ಕಾರ್ಯಕ್ರಮ ಹಾಗೂ ಕೊಂಡಜ್ಜಿ ಬಸಪ್ಪನವರ ಜೀವನ ಚರಿತ್ರೆ ತಿಳಿಸಲಾಯಿತು. ಶ್ರೀ ಬಿ.ಎಸ್. ಮಾದಪ್ಪನವರು ನಾಯಕರಾಗಿ, ಶ್ರೀ ವಿ.ಎಂ. ರಾಮಚಂದ್ರ, ಶ್ರೀ ಕೆ.ಜಿ. ಗೋಪಾಲಕೃಷ್ಣರವರು ಸಹಾಯಕರಾಗಿದ್ದರು. ಸ.ಹಿ.ಪ್ರಾ.ಶಾಲೆ, ಉಪ್ಪಾರ ಗೇರಿ ಶಾಲೆ ಚಾಮರಾಜನಗರದಲ್ಲಿ ಕಾರ್ಯಕ್ರಮ ಜರುಗಿತು.

## ಚಿತ್ರದುರ್ಗ

ಭಾರತ್ ಸ್ಕೌಟ್ಸ್-ಗೈಡ್ಸ್ ಕರ್ನಾಟಕ ಜಿಲ್ಲಾ ಸಂಸ್ಥೆ, ಚಿತ್ರದುರ್ಗ ಹಾಗೂ ಸಾರ್ವಜನಿಕ ಶಿಕ್ಷಣ ಇಲಾಖೆ ಇವರ ಸಹಯೋಗದೊಂದಿಗೆ ಕೊಂಡಜ್ಜಿ ಬಸಪ್ಪನವರ ಜನ್ಮ ಶತಮಾನೋತ್ಸವ ಪ್ರಯುಕ್ತ ಧ್ವಜ ದಿನಾಚರಣೆ ಹಾಗು ಸ್ಕೌಟ್ಸ್-ಗೈಡ್ಸ್‌ಗಳಿಂದ ಸೈಕಲ್ ಜಾಥಾ ಉದ್ಘಾಟನೆ ಸಮಾರಂಭವನ್ನು ದಿನಾಂಕ 07-11-2015 ರಂದು ಹಮ್ಮಿಕೊಳ್ಳಲಾಗಿತ್ತು. ಮಾನ್ಯ ಜಿಲ್ಲಾಧಿಕಾರಿಗಳ ನಿವಾಸ ಮುಂಭಾಗದ ವೃತ್ತದಲ್ಲಿ ಕುಮಾರಿ ಎನ್. ಮಂಜುಶ್ರೀ, ಭಾ.ಆ.ಸೇ, ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್, ಚಿತ್ರದುರ್ಗ ರವರು ಧ್ವಜಚೀಟಿಗಳನ್ನು ಬಿಡುಗಡೆ ಮಾಡಿ ಸೈಕಲ್ ಜಾಥಾ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು. ಮುಖ್ಯ ಅತಿಥಿಗಳಾಗಿ ಸಿಸ್ಟರ್ ಗ್ಲೋರಿಯಾ ದಾಸ್, ಸೆಂತ ಜೋಸೆಫ್‌ರ ಕಾನ್ವೆಂಟ್, ಚಿತ್ರದುರ್ಗ ರವರು ಭಾಗವಹಿಸಿದ್ದರು. ಶ್ರೀ ನಾಗೇಶ್, ಆರ್ ಶಿವಪುರ, ರಾಜ್ಯ ಸಹಾಯಕ ಸಂಘಟನಾ ಆಯುಕ್ತರು (ಸ್ಕೌಟ್ಸ್) ಧ್ವಜ ಚೀಟಿಗಳ ಬಗ್ಗೆ ಮಾಹಿತಿ ನೀಡಿದರು. ಈ ಸಂದರ್ಭದಲ್ಲಿ ಶ್ರೀಮತಿ ಸುಜಯ ಪ್ರಕಾಶ್ ಉಪಾಧ್ಯಕ್ಷರು, ಶ್ರೀಮತಿ ಸುನೀತಾ ಮಲ್ಲಿಕಾರ್ಜುನ್, ಜಿಲ್ಲಾ ಸ್ಥಾನಿಕ ಆಯುಕ್ತರು (ಗೈಡ್ಸ್) ಶ್ರೀ ಉಜ್ಜಿನಪ್ಪ, ಪತ್ರಕರ್ತರು, ಶ್ರೀ ಪಿ.ಎಲ್. ಸುರೇಶ್ ರಾಜ್, ಜಿಲ್ಲಾ ಖಜಾಂಚಿಗಳು, ಶ್ರೀಮತಿ ರೀನಾವೀರಭದ್ರಪ್ಪ, ಜಿಲ್ಲಾ ಜಂಟಿ ಕಾರ್ಯದರ್ಶಿಗಳು, ಶ್ರೀ ವೈ.ಬಿ. ಮಹೇಂದ್ರನಾಥ, ಜಿಲ್ಲಾ ಸಹ ಕಾರ್ಯದರ್ಶಿಗಳು, ಶ್ರೀ ಸಿ.ಆರ್. ಮೊಹಮ್ಮದ್ ಮೊಹಿನುದ್ದೀನ್, ಜಿಲ್ಲಾ ಸ್ಥಾನಿಕ ಆಯುಕ್ತರು (ಸ್ಕೌಟ್ಸ್), ಶ್ರೀಮತಿ ಮಾರಮ್ಮ, ಜಿಲ್ಲಾ ಸ್ಥಾನಿಕ ಆಯುಕ್ತರು (ಗೈಡ್ಸ್) ರವರು ಶ್ರೀಮತಿ ಅನಿಲಾ, ಜಿಲ್ಲಾ ಸ್ಥಾನಿಕ ಆಯುಕ್ತರು (ಗೈಡ್ಸ್) ಜಿಲ್ಲೆಯ 200 ಕಬ್ಸ್/ಬುಲ್ ಬುಲ್ಸ್ ಸ್ಕೌಟ್ಸ್/ಗೈಡ್ಸ್‌ಗಳು ಸ್ಕೌಟ್ಸ್-ಗೈಡ್ಸ್ ಶಿಕ್ಷಕ, ಶಿಕ್ಷಕಿಯರು, ಭಾಗವಹಿಸಿದ್ದರು.

* ದಿನಾಂಕ 01-11-2015 ರಂದು ಜಿಲ್ಲಾಡಳಿತ ಏರ್ಪಡಿಸಿದ್ದ ಕನ್ನಡ ರಾಜ್ಯೋತ್ಸವ ಮೆರವಣಿಗೆ ಸಮಾರಂಭದಲ್ಲಿ ನಗರದ ಬೇರೆ ಬೇರೆ ಶಾಲೆಗಳ 200 ಕಬ್ಸ್/ಬುಲ್ಸ್/ ಸ್ಕೌಟ್ಸ್/ಗೈಡ್ಸ್‌ಗಳು, ಸ್ಕೌಟ್ಸ್-ಗೈಡ್ಸ್ ಶಿಕ್ಷಕ, ಶಿಕ್ಷಕಿಯರು ಹಾಗು ಜಿಲ್ಲಾ ಪದಾಧಿಕಾರಿಗಳು ಭಾಗವಹಿಸಿದ್ದರು.

* ದಿನಾಂಕ 09-11-2015 ರಂದು ಚಿತ್ರದುರ್ಗ ಸರ್ಕಾರಿ ಬಾಲಕರ ಪದವಿ ಪೂರ್ವ ಕಾಲೇಜಿನ ಸಭಾಭವನದಲ್ಲಿ, ಪದವಿ ಪೂರ್ವ ಕಾಲೇಜುಗಳ ಉಪನಿರ್ದೇಶಕರಾದ ಶ್ರೀಮತಿ ನಾಗವೇಣಿ ಇವರ ಅಧ್ಯಕ್ಷತೆಯಲ್ಲಿ ಚಿತ್ರದುರ್ಗ ಜಿಲ್ಲೆಯ ಸರ್ಕಾರಿ, ಅನುದಾನಿತ, ಅನುದಾನರಹಿತ 121 ಪದವಿ ಪೂರ್ವ ಕಾಲೇಜುಗಳ ಪ್ರಾಚಾರ್ಯರುಗಳಿಗೆ ಭಾರತ್ ಸ್ಕೌಟ್ಸ್-ಗೈಡ್ಸ್ ಶಿಕ್ಷಣದ ಹಾಗೂ ರೋವರ್ಸ್/ರೇಂಜರ್ಸ್ ಘಟಕಗಳ ನೊಂದಣಿ/ನವೀಕರಣ ಕುರಿತು ಮಾಹಿತಿ ಕಾರ್ಯಕ್ರಮವನ್ನು ನಡೆಸಲಾಯಿತು. ಶ್ರೀ ವೈ.ಬಿ. ಮಹೇಂದ್ರನಾಥ, ಸಹ ಜಿಲ್ಲಾ ಕಾರ್ಯದರ್ಶಿ ಈ ಸಂದರ್ಭದಲ್ಲಿ ಉಪಸ್ಥಿತರಿದ್ದರು.

**Discipline yourself daily by having a plan-not just vague wishful thinking, commit yourself daily to do something however small, for somebody else for by making other people happy, you will find true happiness yourself.**



## ದಕ್ಷಿಣ ಕನ್ನಡ

ದಿನಾಂಕ 07-11-2015 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ದಕ್ಷಿಣ ಕನ್ನಡ ಜಿಲ್ಲಾ ಸಂಸ್ಥೆಯ ಹಾಗೂ ಮಂಗಳೂರು ನಗರ ಸ್ಥಳೀಯ ಸಂಸ್ಥೆಯ ವತಿಯಿಂದ ಕೊಂಡಜ್ಜಿ ಬಸಪ್ಪ ಶತಮಾನೋತ್ಸವ ಆಚರಣೆ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥಾಪನಾ ದಿನಾಚರಣೆ ಹಾಗೂ ಧ್ವಜ ದಿನಾಚರಣೆಯನ್ನು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಲಾಲ್‌ಬಾಗ್ ಮಂಗಳೂರು ಇಲ್ಲಿ ಸಂಘಟಿಸಲಾಯಿತು.

ಶ್ರೀ ಯತೀಶ್ ಬೈಕಂಪಾಡಿ, ಅಧ್ಯಕ್ಷರು, ರೋಟರಿ ಮಂಗಳೂರು ಇವರು ಮುಖ್ಯ ಅತಿಥಿಯಾಗಿ ಧ್ವಜ ಸ್ಟಿಕ್ಕರ್‌ಗಳನ್ನು ಬಿಡುಗಡೆಗೊಳಿಸಿದರು. ಶ್ರೀಮತಿ ಐರಿನ್ ಡಿ'ಕುನ್ಹ, ಜಿಲ್ಲಾ ಆಯುಕ್ತರು(ಗೈಡ್ಸ್) ಮುಖ್ಯ ಅತಿಥಿಯಾಗಿ ಮಾತನಾಡಿದರು. ಶ್ರೀ ಎನ್.ಜಿ. ಮೋಹನ್, ಜಿಲ್ಲಾ ಮುಖ್ಯ ಆಯುಕ್ತರು, ಅಧ್ಯಕ್ಷತೆ ವಹಿಸಿದ್ದರು. ಶ್ರೀ ವಾಸುದೇವ ಬೋಳೂರು, ಜಿಲ್ಲಾ ಖಜಾಂಚಿ, ಶ್ರೀ ಕೃಷ್ಣಪ್ಪ, ಸಮಾಜ ಸೇವಕರು ಇವರುಗಳು ಅತಿಥಿಗಳಾಗಿ ಭಾಗವಹಿಸಿದ್ದರು. ಶ್ರೀ ಎಂ.ಜಿ. ಕಜೆ, ಜಿಲ್ಲಾ ಸಂಘಟನಾ ಆಯುಕ್ತರು (ಸ್ಕೌಟ್ಸ್) ಸ್ವಾಗತಿಸಿದರು. ಶ್ರೀಮತಿ ಚಂದ್ರಕಲಾ, ಜಿಲ್ಲಾ ಸಂಘಟಕರು (ಗೈಡ್ಸ್) ವಂದಿಸಿದರು. ಶ್ರೀ ಎಂ. ಪ್ರಭಾಕರ್ ಭಟ್, ಸಹಾಯಕ ರಾಜ್ಯ ಸಂಘಟನಾ ಆಯುಕ್ತರು ಕಾರ್ಯಕ್ರಮ ನಿರ್ವಹಿಸಿದರು. ಕೊಂಡಜ್ಜಿ ಬಸಪ್ಪ ಶತಮಾನೋತ್ಸವ ವರ್ಷಾಚರಣೆ ಹಾಗು ಧ್ವಜ ದಿನಾಚರಣೆ ಬಗ್ಗೆ ಸ್ಕೌಟ್ಸ್-ಗೈಡ್ಸ್‌ಗಳಿಂದ ಸೈಕಲ್ ಜಾಥಾ ಹಾಗು ನಗರ ಮೆರವಣಿಗೆ ಕಾರ್ಯಕ್ರಮ ಸಂಘಟಿಸಲಾಯಿತು. ಮಂಗಳೂರು ನಗರದ 200 ಸ್ಕೌಟ್ಸ್-ಗೈಡ್ಸ್‌ಗಳು, ಸ್ಕೌಟ್ಸ್-ಗೈಡ್ಸ್ ಶಿಕ್ಷಕರು ಭಾಗವಹಿಸಿದ್ದರು.

* ದಿನಾಂಕ 04-10-2015 ರಿಂದ 10-10-2015 ರ ವರೆಗೆ ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್, ಶಿಕ್ಷಕ-ಶಿಕ್ಷಕಿಯರ ಪ್ರಾಥಮಿಕ ತರಬೇತಿ ಶಿಬಿರವನ್ನು, ಜಿಲ್ಲಾ ಸ್ಕೌಟ್ಸ್-ಗೈಡ್ಸ್ ತರಬೇತಿ ಕೇಂದ್ರ, ಪಿಲಿಕುಳ, ಮಂಗಳೂರು ಇಲ್ಲಿ ಸಂಘಟಿಸಲಾಯಿತು. ಶಿಬಿರದ ಉದ್ಘಾಟನಾ ಸಮಾರಂಭವು ಜಿಲ್ಲೆಯ ಮುಖ್ಯ ಆಯುಕ್ತರಾದ ಶ್ರೀ ಎನ್.ಜಿ. ಮೋಹನ್ ರವರ ಅಧ್ಯಕ್ಷತೆಯಲ್ಲಿ ಜರುಗಿತು. ಶ್ರೀ ಕೆ.ವಿ. ರಾವ್, ನಿರ್ದೇಶಕರು, ಪ್ರಾದೇಶಿಕ ವಿಜ್ಞಾನ ಕೇಂದ್ರ ಪಿಲಿಕುಳ ಇವರು ದೀಪ ಬೆಳಗಿಸಿ ಶಿಬಿರವನ್ನು ಉದ್ಘಾಟಿಸಿದರು. ಜಿಲ್ಲಾ ಆಯುಕ್ತರು (ಗೈಡ್ಸ್) ಶ್ರೀಮತಿ ಐರಿನ್ ಡಿ'ಕುನ್ಹ, ಜಿಲ್ಲಾ ಕೋಶಾಧಿಕಾರಿ ಶ್ರೀ ವಾಸುದೇವ ಬೋಳೂರು ಇವರು ಉಪಸ್ಥಿತರಿದ್ದರು.

ಸ್ಕೌಟ್ಸ್ ಶಿಕ್ಷಕರ ಶಿಬಿರದ ನಾಯಕರಾಗಿ ಶ್ರೀ ಎಮ್.ಜಿ. ಕಜೆ, ಎ.ಎಲ್.ಟಿ.(ಸ್ಕೌ), ಗೈಡ್ಸ್ ಶಿಕ್ಷಕಿಯರ ಪ್ರಾಥಮಿಕ ತರಬೇತಿ ಶಿಬಿರದ ನಾಯಕರಾಗಿ ಶ್ರೀಮತಿ ಜಯಶ್ರೀ, ಎ.ಎಲ್.ಟಿ.,(ಗೈಡ್), ಕಬ್ಸ್ ಪ್ರಾಥಮಿಕ ತರಬೇತಿ ಶಿಬಿರದ ನಾಯಕರಾಗಿ ಶ್ರೀ ನಾರಾಯಣ ಸ್ವಾಮಿ ಎ.ಎಲ್.ಟಿ. (ಸ್ಕೌ) ಕೋಲಾರ, ಬುಲ್‌ಬುಲ್ ಶಿಬಿರದ ನಾಯಕಿಯಾಗಿ ಶ್ರೀಮತಿ ಲೋರಿನ್ ಕುಟಿನ್ಹಾ ಎ.ಎಲ್.ಟಿ., (ಬುಲ್‌ಬುಲ್) ಇವರುಗಳು ಕಾರ್ಯನಿರ್ವಹಿಸಿದರು. ಸ್ಕೌಟ್ಸ್ ಶಿಕ್ಷಕರ ಪ್ರಾಥಮಿಕ ತರಬೇತಿಯಲ್ಲಿ 33 ಶಿಕ್ಷಕರು, ಗೈಡ್ಸ್ ಪ್ರಾಥಮಿಕ ತರಬೇತಿಯಲ್ಲಿ 39 ಶಿಕ್ಷಕರು, ಬುಲ್‌ಬುಲ್ ಪ್ರಾಥಮಿಕ ತರಬೇತಿಯಲ್ಲಿ 11 ಶಿಕ್ಷಕರು, ಕಬ್ಸ್ ಪ್ರಾಥಮಿಕ ತರಬೇತಿಯಲ್ಲಿ 9 ಶಿಕ್ಷಕ-ಶಿಕ್ಷಕಿಯರು ಭಾಗವಹಿಸಿದ್ದರು.

ಶಿಬಿರಕ್ಕೆ ಶ್ರೀ ವಾಲ್ಟರ್ ಡಿ'ಮೆಲ್ಲೊ, ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಇವರು ಭೇಟಿ ನೀಡಿ ಸ್ಕೌಟಿಂಗ್-ಗೈಡಿಂಗ್‌ನ್ನು ಕಡ್ಡಾಯವಾಗಿ ನಡೆಸುವ ಬಗ್ಗೆ ತಿಳಿಸಿದರು. ಶ್ರೀ ರಾಧಾಕೃಷ್ಣ ಭಟ್ ವಿಷಯ ಪರಿವೀಕ್ಷಣಾಧಿಕಾರಿಗಳು ಸ್ಕೌಟಿಂಗ್-ಗೈಡಿಂಗ್‌ನ ಮೂಲಕ ಆಗುವ ಪ್ರಯೋಜನಗಳ ಬಗ್ಗೆ ತಿಳಿಸಿದರು. ಶ್ರೀ ಅಡ್ಡೂರು ಕೃಷ್ಣರಾವ್ ಸ್ಕೌಟ್-ಗೈಡ್‌ಗಳ ಸರ್ವಾಂಗೀಣ ಅಭಿವೃದ್ಧಿಯಲ್ಲಿ ಶಿಕ್ಷಕರ ಪಾತ್ರದ ಬಗ್ಗೆ ತಿಳಿಸಿದರು.

ಶಿಬಿರದ ಸಮಾರೋಪ ಸಮಾರಂಭದಲ್ಲಿ ಶ್ರೀ ಎಸ್.ಎ. ಪ್ರಭಾಕರ ಶರ್ಮ ಕಾರ್ಯ ನಿರ್ವಹಣಾಧಿಕಾರಿಗಳು ಪಿಲಿಕುಳ ನಿಸರ್ಗಧಾಮ, ಮುಖ್ಯ ಅತಿಥಿಯಾಗಿ ಮಾತನಾಡಿದರು. ಜಿಲ್ಲಾ ಮುಖ್ಯ ಆಯುಕ್ತರು ಶ್ರೀ ಎನ್.ಜಿ. ಮೋಹನ್ ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಸ್ಕೌಟಿಂಗ್-ಗೈಡಿಂಗ್ ಚಟುವಟಿಕೆಗಳು ಹಾಗೂ ಸದಸ್ಯತ್ವವನ್ನು ಹೆಚ್ಚಿಸುವ ಬಗ್ಗೆ ತಿಳಿಸಿದರು.

* ದಿನಾಂಕ 13-10-2015 ರಿಂದ 19-10-2015 ರ ವರೆಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ದ.ಕ. ಜಿಲ್ಲಾ ಸಂಸ್ಥೆ ಸಾರ್ವಜನಿಕ ಶಿಕ್ಷಣ ಇಲಾಖೆ ಸಹಕಾರದಲ್ಲಿ ಕೊಂಡಜ್ಜಿ ಬಸಪ್ಪ ಶತಮಾನೋತ್ಸವ ವರ್ಷಾಚರಣೆ ಪ್ರಯುಕ್ತ ಹಮ್ಮಿಕೊಂಡಿದ್ದ ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್, ಶಿಕ್ಷಕ-ಶಿಕ್ಷಕಿಯರ ಅಡ್ವಾನ್ಸ್ ತರಬೇತಿ ಶಿಬಿರದಲ್ಲಿ 49 ಶಿಕ್ಷಕ-ಶಿಕ್ಷಕಿಯರು ಭಾಗವಹಿಸಿದ್ದರು.

ಸ್ಕೌಟ್ಸ್ ತರಬೇತಿಯ ನಾಯಕರಾಗಿ ಶ್ರೀ ಬಿ.ಎಮ್. ತುಂಬೆ, ಎ.ಎಲ್.ಟಿ, (ಸ್ಕೌ), ಗೈಡ್ಸ್ ತರಬೇತಿಯ ನಾಯಕಿಯಾಗಿ ಶ್ರೀಮತಿ ಪ್ರೇಮಲತಾ, ಎ.ಎಲ್.ಟಿ., (ಗೈ), ಕಬ್ಸ್ ತರಬೇತಿಯ ನಾಯಕರಾಗಿ ಶ್ರೀಮತಿ ರವಿಕಲಾ, ಬುಲ್ ಬುಲ್ ತರಬೇತಿಯ ನಾಯಕಿಯಾಗಿ ವಿಮಲಾ ಬ್ಯಾ, ಎ.ಎಲ್.ಟಿ.(ಬುಲ್ ಬುಲ್ಸ್) ಕಾರ್ಯನಿರ್ವಹಿಸಿದ್ದರು. ಶಿಬಿರವನ್ನು ಶ್ರೀ ವಾಸುದೇವ ಬೋಳೂರು, ಜಿಲ್ಲಾ ಕೋಶಾಧಿಕಾರಿಗಳು ಉದ್ಘಾಟಿಸಿದರು. ಶ್ರೀ ಎನ್.ಜಿ. ಮೋಹನ್, ಅಧ್ಯಕ್ಷತೆ ವಹಿಸಿದ್ದರು. ಶ್ರೀಮತಿ ಐರಿನ್ ಡಿ'ಕುನ್ಹ, ಮುಖ್ಯ ಅತಿಥಿಯಾಗಿ ಭಾಗವಹಿಸಿದ್ದರು. ಶಿಬಿರದ ಸಮಾರೋಪ ಸಮಾರಂಭದಲ್ಲಿ ಶ್ರೀ ರಂಗನಾಥ್ ಭಟ್, ಕಾರ್ಯದರ್ಶಿಗಳು, ಪ್ರೌಢಶಾಲಾ ಆಡಳಿತ ಮಂಡಳಿ ಇವರು ಮುಖ್ಯ ಅತಿಥಿಗಳಾಗಿ ಮಾತನಾಡಿದರು. ಶ್ರೀ ಎನ್.ಜಿ. ಮೋಹನ್, ಅಧ್ಯಕ್ಷತೆ ವಹಿಸಿದ್ದರು.

* ದಿನಾಂಕ 04-11-2015 ರಂದು ಮುಡಿಪು ಸ್ಥಳೀಯ ಸಂಸ್ಥೆಗೆ ಒಳಪಟ್ಟ ಸ್ಕೌಟ್-ಗೈಡ್, ಕಬ್-ಬುಲ್‌ಬುಲ್‌ಗಳಿಗೆ ಪಟಾಲಂ/ಷಟ್ಕ ನಾಯಕರ ತರಬೇತಿ ಶಿಬಿರವನ್ನು ಸೆಂಟ್ರಲ್ ಮುಸ್ಲಿಂ ಅನುದಾನಿತ ಹಿ.ಪ್ರಾ.ಶಾಲೆ ಮಲಾರ್ ಪದವು ಇಲ್ಲಿ ಕೊಂಡಜ್ಜಿ ಬಸಪ್ಪ ಶತಮಾನೋತ್ಸವ ವರ್ಷಾಚರಣೆ ಪ್ರಯುಕ್ತ ನಡೆಸಲಾಯಿತು. ಬೆಳಿಗ್ಗೆ 10 ಗಂಟೆಗೆ ಧ್ವಜಾರೋಹಣ ನಡೆಸಿದ ನಂತರ ಉದ್ಘಾಟನಾ ಸಮಾರಂಭ ನಡೆಸಲಾಯಿತು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಸ್ಥಳೀಯ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ರಾಮರಾವ್ ಯಂ. ಇವರು ವಹಿಸಿದ್ದರು. ಶಾಲೆಯ ಮುಖ್ಯೋಪಾಧ್ಯಾಯರಾದ ಶ್ರೀ ಹೆಚ್. ಎಮ್. ಮಹಮ್ಮದ್ ಮಲಾರ್ ಪದವುರವರು ಶಿಬಿರವನ್ನು ಉದ್ಘಾಟಿಸಿದರು. ಶಿಬಿರ ನಾಯಕಿ ಸಿಸ್ಟರ್ ಲೊರಿನ್ ಕುಟಿನ್ಹಾರವರು ವೇದಿಕೆಯಲ್ಲಿ ಉಪಸ್ಥಿತರಿದ್ದರು. ಕಾರ್ಯದರ್ಶಿ ಫೆಲಿಕ್ಸ್ ಡಿ'ಸೋಜರವರು ಸ್ವಾಗತಿಸಿದರು. ಅಧ್ಯಕ್ಷರು ಹಾಗು ಶಾಲಾ ಮುಖ್ಯೋಪಾಧ್ಯಾಯರು ಶಿಬಿರಕ್ಕೆ ಶುಭ ಕೋರಿದರು. ಸಹಕಾರ್ಯದರ್ಶಿ ಶ್ರೀಮತಿ ರಾಜೇಶ್ವರಿರವರು ವಂದಿಸಿದರು. ಶ್ರೀ ಜೋನ್ ಎ ಫರ್ನಾಂಡೀಸ್ ರವರು ಕಾರ್ಯಕ್ರಮ ನಿರೂಪಿಸಿದರು.

ಸಂಸ್ಥೆಯ ಅಧ್ಯಕ್ಷರಾದ ಶ್ರೀ ಸಂತೋಷ್ ಕುಮಾರ್ ರೈಯವರು ಹಾಗು ಅತಿಥೇಯ ಶಾಲೆಯ ಸಂಚಾಲಕರಾದ ಶ್ರೀ ಮಧುಸೂದನ್ ರವರು ಶಿಬಿರಕ್ಕೆ ಭೇಟಿ ನೀಡಿ ಸ್ಕೌಟ್-ಗೈಡ್‌ಗಳಿಗೆ ಶುಭ ಕೋರಿದರು.

## ಧಾರವಾಡ

ದಿನಾಂಕ 02-10-2015 ರಂದು ಧಾರವಾಡ ತಾಲ್ಲೂಕ ಮನಸೂರ ಗ್ರಾಮದಲ್ಲಿ ಪರಿಸರ ರಕ್ಷಣೆಗಾಗಿ ಗಿಡಗಳನ್ನು ನೆಡುವ ಕಾರ್ಯದಲ್ಲಿ ಭಾಗವಹಿಸಿದ್ದ ಸ್ಕೌಟ್ಸ್-ಗೈಡ್ಸ್‌ಗಳು ಸ್ವಚ್ಚತಾ ಕಾರ್ಯಕ್ರಮವನ್ನು ಕೈಗೊಂಡರು. ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರು ಹಾಗೂ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿವಾಹಕ ಅಧಿಕಾರಿಗಳೂ ಆದ ಶ್ರೀಮತಿ ಸುಷ್ಮಾ ಗೋಡಬೋಲೆ ಹಾಗೂ ಜಿಲ್ಲಾ ಪಂಚಾಯತ್ ಉಪಾಧ್ಯಕ್ಷರು ಶ್ರೀಮತಿ ಶಾಂತಾ ನಿಡುವಸೆ ಭಾಗವಹಿಸಿದ್ದರು.

* ಕೊಂಡಜ್ಜಿ ಬಸಪ್ಪ ಜನ್ಮ ಶತಮಾನೋತ್ಸವದ ಅಂಗವಾಗಿ ದಿನಾಂಕ 06-10-2015 ರಿಂದ 10-10-2015ರ ವರೆಗೆ ನಡೆದ ತೃತೀಯ ಸೋಪಾನ ಪದಕ ಸಿದ್ಧತಾ ಶಿಬಿರದಲ್ಲಿ 200 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

* ದಿನಾಂಕ 31-10-2015 ರಂದು ರಾಷ್ಟ್ರೀಯ ಏಕತಾ ದಿವಸ ಹಾಗು ರಾಷ್ಟ್ರೀಯ ಸಂಕಲ್ಪ ದಿವಸದ ಅಂಗವಾಗಿ ಜಿಲ್ಲಾಧಿಕಾರಿಗಳ ಕಚೇರಿ ಆವರಣದಲ್ಲಿ ನಡೆದ ಸರ್ವಧರ್ಮ ಪ್ರಾರ್ಥನೆಯಲ್ಲಿ 250 ಸ್ಕೌಟ್ಸ್-ಗೈಡ್ಸ್‌ಗಳು ಹಾಗು ಪದಾಧಿಕಾರಿಗಳು ಭಾಗವಹಿಸಿದ್ದರು. ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಸಂಸ್ಥೆಯ ಅಧ್ಯಕ್ಷರೂ ಆದ ಶ್ರೀ ರಾಜೇಂದ್ರ ಚೋಳನ್. ಜಿಲ್ಲಾ ಪಂಚಾಯತ್ ಮುಖ್ಯ ನಿರ್ವಾಹಕ ಅಧಿಕಾರಿಗಳಾದ ಶ್ರೀಮತಿ ಸುಷ್ಮ ಗೋಡಬೋಲೆ ಹಾಗೂ ಜಿ.ಪ. ಅಧ್ಯಕ್ಷರು ಭಾಗವಹಿಸಿದ್ದರು.

## ಹಾಸನ

ದಿನಾಂಕ 09-10-2015 ರಿಂದ 11-10-2015 ರ ವರೆಗೆ ಬಿ.ಎಡ್ ಪ್ರಶಿಕ್ಷಣಾರ್ಥಿಗಳಿಗೆ ನಗರದ ಸಮೀಪದಲ್ಲಿನ ಮಣಕತ್ತೂರಿನಲ್ಲಿ 3 ದಿನಗಳ "ಸಮುದಾಯ ವಾಸ್ತವ್ಯ ಶಿಬಿರವನ್ನು ಏರ್ಪಡಿಸಲಾಗಿತ್ತು. ಈ ಶಿಬಿರದ 2ನೇ ದಿನ ದಿನಾಂಕ 10-10-2015 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆ ವತಿಯಿಂದ ಸ್ಕೌಟಿಂಗ್-ಗೈಡಿಂಗ್‌ನ ಪರಿಚಯಾತ್ಮಕ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು.

96 ಪ್ರಶಿಕ್ಷಣಾಧಿಕಾರಿಗಳು ಭಾಗವಹಿಸಿದ್ದ ಈ ಕಾರ್ಯಕ್ರಮದಲ್ಲಿ, ವಿಶ್ವ ಸ್ಕೌಟಿಂಗ್ ಮತ್ತು ಗೈಡಿಂಗ್ ಬೆಳೆದು ಬಂದ ಇತಿಹಾಸ, ನಮ್ಮ ಭಾರತ ಹಾಗೂ ಕರ್ನಾಟಕದಲ್ಲಿ ಸ್ಕೌಟಿಂಗ್ ಮತ್ತು ಗೈಡಿಂಗ್‌ನ ವ್ಯಾಪ್ತಿ, ಇಂದಿನ ಯುವ ಸಮುದಾಯಕ್ಕೆ ಸ್ಕೌಟಿಂಗ್ ಮತ್ತು ಗೈಡಿಂಗ್‌ನ ಕೊಡುಗೆಯ ಬಗ್ಗೆ ಪರಿಚಯಿಸಲಾಯಿತು.

ಈ ಕಾರ್ಯಕ್ರಮದಲ್ಲಿ ಶ್ರೀಮತಿ ಕಾಮೇಶ್ವರಿ ಭಟ್, ಎಎಲ್‌ಟಿ(ಗೈ), ಕಾರ್ಯದರ್ಶಿ ಶ್ರೀ ಜೆ.ಎಲ್. ಲೀಲಾ ಮಹೇಶ್ವರ್ ಪ್ರೀ ಎಎಲ್‌ಟಿ (ಎಸ್) ಮತ್ತು ಸ್ಕೌಟರ್ ಶ್ರೀ ಸತೀಶ್, ಸಂಪನ್ಮೂಲ ವ್ಯಕ್ತಿಗಳಾಗಿ ಭಾಗವಹಿಸಿದ್ದರು.

## ಕಲಬುರಗಿ

ದಿನಾಂಕ 08-11-2015 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ಜಿಲ್ಲಾ ಸಂಸ್ಥೆ, ಕಲಬುರಗಿ ವತಿಯಿಂದ ಸರಕಾರಿ ಪದವಿ ಪೂರ್ವ ಕಾಲೇಜು, ಕಲಬುರಗಿಯಲ್ಲಿ ಭಾರತ ಸ್ಕೌಟ್ಸ್-ಗೈಡ್ಸ್‌ನ ಸಂಸ್ಥಾಪನಾ ದಿನಾಚರಣೆ ಮತ್ತು ದಿ॥ ಕೊಂಡಜ್ಜಿ ಬಸಪ್ಪನವರ ಜನ್ಮ ಶತಮಾನೋತ್ಸವ ಸಮಾರಂಭವನ್ನು ಆಚರಿಸಲಾಯಿತು.

ಈ ಕಾರ್ಯಕ್ರಮದ ಉದ್ಘಾಟಕರಾಗಿ ಶ್ರೀಮಾನ್ ರಾಧಾಕೃಷ್ಣರಾವ ಮದನಕರ, ಅಪರ ಆಯುಕ್ತರು ಸಾರ್ವಜನಿಕ ಶಿಕ್ಷಣ ಇಲಾಖೆ, ಕಲಬುರಗಿ, ಅವರು ಭಾಗವಹಿಸಿ ದಿ॥ ಕೊಂಡಜ್ಜಿ ಬಸಪ್ಪನವರು ಸಜ್ಜನಿಕೆ ಸೇವಾ ಮನೋಭಾವ ವ್ಯಕ್ತಿತ್ವವುಳ್ಳವರಾಗಿದ್ದರು. ಅಂತಹ ವ್ಯಕ್ತಿಗಳ ಜನ್ಮ ಶತಮಾನೋತ್ಸವ ಆಚರಿಸುತ್ತಿರುವುದು ಅರ್ಥಪೂರ್ಣ ವಿಷಯವೆಂದು ಹೇಳಿದರು. ಶಿಕ್ಷಣದಲ್ಲಿ ಮಕ್ಕಳ ಹಕ್ಕು ಮಹತ್ವ ಪಡೆದಿದ್ದು ಪ್ರತಿಯೊಂದು ಮಗು ಶಿಕ್ಷಣ ಲಾಭ ಪಡೆಯುವಂತಾಗಬೇಕು ಎಂದು ಹೇಳಿದರು.

ಮುಖ್ಯ ಅಥಿತಿಗಳಾದ ಶ್ರೀಮತಿ ಆರತಿ ತಿವಾರಿ, ಕಲಬುರಗಿ ಮಹಾನಗರ ಪಾಲಿಕೆ ಸದಸ್ಯರು ಮಾತನಾಡುತ್ತಾ ಮಕ್ಕಳು ಸಂವಿಧಾನದ ಬಗ್ಗೆ ಚೆನ್ನಾಗಿ ಅರ್ಥಮಾಡಿಕೊಳ್ಳಬೇಕು. ಇಂದಿನ ಮಕ್ಕಳಲ್ಲಿ ಒಳ್ಳೆಯ ಸಂಸ್ಕಾರ ಒಳ್ಳೆಯ ಶಿಕ್ಷಣ ಸಿಗಬೇಕು. ಈ ನಿಟ್ಟಿನಲ್ಲಿ ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ಒಳ್ಳೆಯ ಕೆಲಸ ಮಾಡುತ್ತಿದೆ ಎಂದರು. ಶ್ರೀ ಶರಣಪ್ಪಾ ಕೋಬಾಳ್ಕರ್, ಉಪ ನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ, ಕಲಬುರಗಿ ಜಿಲ್ಲೆ, ಇವರು ಧ್ವಜಗಳನ್ನು ಬಿಡುಗಡೆ ಮಾಡಿ ಸ್ಕೌಟ್ಸ್-ಗೈಡ್ಸ್ ಸಂಸ್ಥೆ ಒಳ್ಳೆಯ ಕೆಲಸ ಮಾಡುತ್ತಿದೆ ಎಂದರು.

ಶ್ರೀ ಎಸ್.ಪಿ. ಸುಳ್ಳದ್, ಜಿಲ್ಲಾ ಆಯುಕ್ತರು (ಸ್ಕೌಟ್ಸ್) ರವರು ಅಧ್ಯಕ್ಷತೆ ವಹಿಸಿದ್ದರು. ಅಭಿವೃದ್ಧಿಗಾಗಿ ಹಲವಾರು ಕಾರ್ಯಕ್ರಮಗಳನ್ನು ನಮ್ಮ ಜಿಲ್ಲಾ ಸಂಸ್ಥೆಯಿಂದ ನಡೆಸುತ್ತಾ ಬಂದಿದ್ದೇವೆ. ಇದರ ಸದುಪಯೋಗ ಪಡೆಯಲು ಸ್ಕೌಟ್-ಗೈಡ್‌ಗಳಿಗೆ ಸಲಹೆ ನೀಡಿದರು.

ಶ್ರೀ ಭರತರಾಜ ಸಾವಳಗಿ, ಕ್ಷೇತ್ರ ಶಿಕ್ಷಣಾಧಿಕಾರಿಗಳು, ಕಲಬುರಗಿ ಉತ್ತರ ವಲಯ, ಶ್ರೀ ಮುರಗೇಂದ್ರ ಅಧ್ಯಕ್ಷರು ಸರಕಾರಿ ಶಿಕ್ಷಕರ ಸಂಘ, ಕಲಬುರಗಿ ಉತ್ತರ ವಲಯ ಡಾ. ಶೀಲಾ ಸಿದ್ಧರಾಮ, ಶ್ರೀಮತಿ ಜಯಶ್ರೀ ಗೋಗಿ, ಶ್ರೀಮತಿ ಕಮಲಾದೇವಿ ಚಿಕ್ಕಮಠ ಮುಂತಾದವರು ಭಾಗವಹಿಸಿದರು. ಶ್ರೀ ಚನ್ನವೀರಯ್ಯಾ, ಜಿಲ್ಲಾ ಕಾರ್ಯದರ್ಶಿಗಳು ಸ್ವಾಗತಿಸಿದರು. ಶ್ರೀ ಅಮರೀಶ ಕೋರಿ ಪ್ರಾಸ್ತಾವಿಕವಾಗಿ ಮಾತನಾಡಿದರು. ಶ್ರೀ ವೀರಭದ್ರಯ್ಯಾ ಯಡಹಳ್ಳಿ ವಂದನಾರ್ಪಣೆ ಮಾಡಿದರು. ಶ್ರೀ ಪೀರಪ್ಪಾ ಹೊಗೊಂಡ ನಿರೂಪಣೆ ಮಾಡಿದರು.

## ಕಾರವಾರ

ಮಕ್ಕಳ ಸರ್ವಾಂಗೀಣ ಪ್ರಗತಿಗೆ ಸ್ಕೌಟ್–ಗೈಡ್ಸ್ ಶಿಕ್ಷಣ ತುಂಬಾ ಪೂರಕವಾಗಿದ್ದು ಸರಕಾರಿ, ಅನುದಾನಿತ, ಅನುದಾನ ರಹಿತ ಹೀಗೆ ರಾಜ್ಯದ ಎಲ್ಲಾ ಶಾಲೆಗಳಲ್ಲೂ ಸ್ಕೌಟ್ ಶಿಕ್ಷಣ ದೊರಕಬೇಕೆಂಬುದು ತನ್ನ ಹೃದಯಾಂತರಾಳದ ಆಶಯವಾಗಿದೆ ಎಂದು ರಾಜ್ಯ ಮುಖ್ಯ ಆಯುಕ್ತ ಶ್ರೀ ಪಿ.ಜಿ.ಆರ್. ಸಿಂಧ್ಯ ನುಡಿದರು. ಹೊನ್ನಾವರದ ಸೋಷಿಯಲ್ ಕ್ಲಬ್‌ನಲ್ಲಿ ನಡೆದ ಕಾರವಾರ ಜಿಲ್ಲೆಯ ಐದು ತಾಲೂಕಿನ ಹಾಗು ಜಿಲ್ಲಾ ಪದಾಧಿಕಾರಿಗಳ ಸಭೆಯನ್ನು ಉದ್ದೇಶಿಸಿ ಅವರು ಮಾತನಾಡಿದರು. ಈ ದಿಶೆಯಲ್ಲಿ ಕಾರವಾರ ಜಿಲ್ಲೆ ಉತ್ತಮ ಕಾರ್ಯವನ್ನು ಮಾಡುತ್ತಿದ್ದು ಇನ್ನೂ ಹೆಚ್ಚು ಪ್ರಗತಿಯನ್ನು ಹೊಂದಲು ರಾಜ್ಯ ಸಂಸ್ಥೆ ಸ್ಕೌಟ್ಸ್–ಗೈಡ್ಸ್‌ಗಳಿಗೆ ಉಚಿತ ಸಮವಸ್ತ್ರ ಅಲ್ಲದೇ ಹೆಚ್ಚಿನ ಅನುದಾನ ಬಿಡುಗಡೆ ಮಾಡುವುದಾಗಿ ತಿಳಿಸಿದರು. ಜಿಲ್ಲಾ ಹಾಗೂ ತಾಲೂಕಾ ಶಿಕ್ಷಣಾಧಿಕಾರಿಗಳು, ಜಿಲ್ಲೆಯ ಪದಾಧಿಕಾರಿಗಳು, ತಾಲೂಕಾ ಶಿಕ್ಷಣಾಧಿಕಾರಿಗಳು, ಶ್ರೀಮತಿ ಜಾನಕಿ ವೇಣುಗೋಪಾಲ್ ಈ ಸಭೆಯಲ್ಲಿ ಉಪಸ್ಥಿತರಿದ್ದರು. ಜಿಲ್ಲೆಯ ಮುಖ್ಯ ಆಯುಕ್ತ ಡಾ॥ ಜಿ.ಜಿ. ಸಭಾಹಿತ, ಜಿಲ್ಲಾ ಕಾರ್ಯದರ್ಶಿ ಶ್ರೀ ಬಿ.ಡಿ. ಫರ್ನಾಂಡೀಸ್, ಶ್ರೀ ಕೃಷ್ಣಮೂರ್ತಿ ಭಟ್ ಶಿವಾನಿ, ಶ್ರೀಮತಿ ಭಾರತ ಡಯಾಸ್ ಮುಂತಾದವರು ಮಾತನಾಡಿದರು. ಶ್ರೀಮತಿ ಶೋಭಾ ಕುಲಕರ್ಣಿ ಧನ್ಯವಾದ ಸಮರ್ಪಣೆ ಮಾಡಿದರೆ ಕೋಶಾಧ್ಯಕ್ಷ ಶ್ರೀ ರಾಜು ಹೆಬ್ಬಾರ ನಿರ್ವಹಿಸಿದರು.

* ಧ್ವಜ ಚೀಟಿ ಬಿಡುಗಡೆ ಹಾಗು ಸೈಕಲ್ ಜಾತಾವನ್ನು ಜಿಲ್ಲಾ ಮಟ್ಟದಲ್ಲಿ ಹಮ್ಮಿಕೊಂಡಿದ್ದು ಧ್ವಜ ಚೀಟಿಯನ್ನು ಜಿಲ್ಲೆಯ ಅಧ್ಯಕ್ಷರು ಹಾಗೂ ಉತ್ತರ ಕನ್ನಡ ಜಿಲ್ಲಾಧಿಕಾರಿಗಳಾದ ಶ್ರೀ ಉಜ್ವಲ್ ಕುಮಾರ್ ಘೋಷ್ ರವರು ಬಿಡುಗಡೆ ಮಾಡಿದರು. ನಂತರ ಸ್ಕೌಟ್ಸ್–ಗೈಡ್ಸ್, ರೇಂಜರ್ಸ್–ರೋವರ್ಸ್‌ಗಳ ಸೈಕಲ್ ಜಾಥಾಕ್ಕೆ ಶ್ರೀ ಉಜ್ವಲ ಕುಮಾರ್ ಘೋಷ್ ರವರು ಹಸಿರು ನಿಶಾನೆ ತೋರಿಸುವುದರ ಮೂಲಕ ಚಾಲನೆ ನೀಡಿದರು.

## ಕೊಪ್ಪಳ

ದಿನಾಂಕ 15–10–2015 ರಂದು ಕೊಂಡಜ್ಜಿ ಬಸಪ್ಪ ರವರ ಸ್ಮರಣಾರ್ಥ ಶಾರದಾ ಪ್ರೌಢಶಾಲೆಯ ಸ್ಕೌಟ್ಸ್–ಗೈಡ್ಸ್‌ಗಳಿಂದ ಒಂದು ದಿನದ ಹೊರಸಂಚಾರ ಶಿಬಿರವನ್ನು ಅಶೋಕ ಶಿಲಾಸ್ತಂಭದಲ್ಲಿ ನಡೆಸಲಾಯಿತು. ಮುಂಜಾನೆಯಿಂದ ಸಂಜೆಯವರೆಗೆ ವಿವಿದ ಚಟುವಟಿಕೆಗಳನ್ನು ನಡೆಸಲಾಯಿತು. ನಂತರ ಮುಕ್ತಾಯ ಸಮಾರಂಭದಲ್ಲಿ ಶ್ರೀ ಮಲ್ಲಿಕಾರ್ಜುನ ಚೌಕಿಮಠ, ಜಿಲ್ಲಾ ಕಾರ್ಯದರ್ಶಿ ಅಧ್ಯಕ್ಷತೆ ವಹಿಸಿ ಮಾತನಾಡುತ್ತಾ ಸ್ಕೌಟ್ಸ್–ಗೈಡ್ಸ್‌ಗಳಿಗೆ ಒಳಾಂಗಣ – ಹೊರಾಂಗಣ ಚಟುವಟಿಕೆಗಳು ಇರಬೇಕು. ಇದರ ಜೊತೆಗೆ ಸಾರ್ವಜನಿಕರಿಗೆ ಅರಿವು ಮೂಡಿಸುವ ಕಾರ್ಯಕ್ರಮ ಹಮ್ಮಿಕೊಳ್ಳಬೇಕು ಎಂದು ಹೇಳಿದರು. ಇದರ ನಾಯಕತ್ವವನ್ನು ಶ್ರಿ ಎ.ಎಸ್. ಶಿವಕುಮಾರ್, ಎ.ಎಸ್.ಓ.ಸಿ., ವಹಿಸಿದ್ದರು. ಸ್ಕೌಟ್ ಮಾಸ್ಟರ್ ಶ್ರಿ ಮಹೇಶ ಜಾಲಿಹಾಳ, ಶ್ರೀ ಶಿವಯ್ಯ ಹಾಗು ಶಾಲೆಯ ಎಲ್ಲಾ ಸಿಬ್ಬಂದಿ ವರ್ಗದವರು ಭಾಗವಹಿಸಿದ್ದರು.

* ದಿನಾಂಕ 02–10–2015 ರಂದು ಸರಕಾರಿ ಪ್ರಥಮ ದರ್ಜೆ ಕಾಲೇಜಿನ ರೋವರ್ಸ್, ರೇಂಜರ್ಸ್ ಗಳಿಂದ ಶ್ರಮದಾನ ಶಿಬಿರವನ್ನು ಕಾಲೇಜಿನ ಆವರಣದಲ್ಲಿ ನಡೆಸಲಾಯಿತು. ಇದರ ನಾಯಕತ್ವವನ್ನು ಕಾಲೇಜಿನ ರೋವರ್ ಸ್ಕೌಟ್ ಲೀಡರ್ ಶ್ರೀ ನಟರಾಜ ಹಾಗು ರೇಂಜರ್ ಸ್ಕೌಟ್ ಲೀಡರ್ ಶ್ರೀಮತಿ ಶೋಭಾ ವಹಿಸಿದ್ದರು. ರೋವರ್ಸ್–ರೇಂಜರ್ಸ್‌ಗಳಿಗೆ ಪ್ರವೇಶ, ನಿಪುಣ್, ರಾಜ್ಯ ಪುರಸ್ಕಾರದವರೆಗೆ ಬಗ್ಗೆ ತಿಳಿಸಲಾಯಿತು. ಈ ಶಿಬಿರದಲ್ಲಿ ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಶಾಂತಮಲ್ಲಪ್ಪ ಹಾಗು ಸಿಬ್ಬಂದಿ ವರ್ಗದವರು, ಎಲ್ಲಾ ಉಪನ್ಯಾಸಕ–ಉಪನ್ಯಾಸಕಿಯರು ಭಾಗವಹಿಸಿದ್ದರು.



A movement can not stand still.
It must go forward or slide backwards.
We aim to move ahead.

# ಕೋಲಾರ

ದಿನಾಂಕ 02-09-2015 ರಿಂದ 06-09-2015 ರವರೆಗೆ ಕೋಲಾರ ತಾಲ್ಲೂಕಿನ ಬೆಣ್ಣಂಗೂರು ಗ್ರಾಮದ ಶ್ರೀ ಕೋದಂಡರಾಮಸ್ವಾಮಿ ದೇವಾಲಯದ ಆವರಣದಲ್ಲಿ ಜಿಲ್ಲಾ ಮಟ್ಟದ ಸಾಹಸ ಮತ್ತು ಸಮುದಾಯ ಅಭಿವೃದ್ಧಿ ಶಿಬಿರವನ್ನು ಹಮ್ಮಿಕೊಳ್ಳಲಾಗಿತ್ತು. ಶಿಬಿರದ ನಾಯಕರುಗಳಾಗಿ ಜಿಲ್ಲಾ ಸಹಾಯಕ ಆಯುಕ್ತರಾದ ಶ್ರೀ ಕೆ.ಆರ್. ಸುರೇಶ್, ಜಿಲ್ಲಾ ತರಬೇತಿ ಆಯುಕ್ತೆ (ಗೈಡ್ಸ್) ಶ್ರೀಮತಿ ಉಮಾದೇವಿ ರವರುಗಳು ಕಾರ್ಯ ನಿರ್ವಹಿಸಿದರು. ಜಿಲ್ಲಾ ಸ್ಥಾನಿಕ ಆಯುಕ್ತರು (ಅಭಿವೃದ್ಧಿ) ರವರಾದ ಶ್ರೀ ತ್ಯಾಗರಾರ್ ರವರು ದೀಪ ಬೆಳಗುವ ಮೂಲಕ ಶಿಬಿರವನ್ನು ಉದ್ಘಾಟಿಸಿದರು. ನೀರನ್ನು ಮಿತವಾಗಿ ಬಳಸುವ ತಂತ್ರಗಳನ್ನು ಜನರಿಗೆ ತಿಳಿಸುವಂತಹ ಮಹಾನ್ ಕೆಲಸ ಮಾಡಬೇಕು ಎಂದು ತಿಳಿಸಿದರು.

ಉದ್ಘಾಟನಾ ಶಿಬಿರದಲ್ಲಿ ಗ್ರಾಮ ಪಂಚಾಯತ್ ಸದಸ್ಯರಾದ ಶ್ರೀ ವೆಂಕಟರೆಡ್ಡಿ, ಶ್ರೀಮತಿ ಸುಜಾತ ಆಂಜನಪ್ಪ, ಗ್ರಾಮದ ಮುಖಂಡರಾದ ಶ್ರೀ ಕೊಂಡಪ್ಪ, ಶ್ರೀ ಪ್ರಕಾಶ್, ಶ್ರೀ ನಾರಾಯಣಸ್ವಾಮಿ, ಶಿಕ್ಷಕರಾದ ಶ್ರೀಮತಿ ಸುಬ್ಬಮ್ಮ, ಮುನಿಸ್ವಾಮಿ, ಶ್ರೀಮತಿ ಕಮಲಾಕ್ಷಿ, ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ಮುನಿನಾರಾಣಪ್ಪ, ಜಿಲ್ಲಾ ಸಂಘಟಕ ಶ್ರೀ ವಿ. ಬಾಬು ರವರುಗಳು ಉಪಸ್ಥಿತರಿದ್ದರು.

ಈ ಶಿಬಿರದಲ್ಲಿ 79 ರೋವರ್ಸ್, 46 ರೇಂಜರ್ಸ್‌ಗಳು ಭಾಗವಹಿಸಿದ್ದರು. ಶಿಬಿರದಲ್ಲಿ ಬೆಂಕಿಯ ಬಳಕೆ, ವಿವಿಧ ರೀತಿಯ ಒಲೆಗಳು, ಪ್ರಥಮ ಚಿಕಿತ್ಸೆ, ಅಂದಾಜು ಮಾಡುವುದು, ಮ್ಯಾಪಿಂಗ್, ಅಗ್ರಗಾಮಿತ್ವ, ನಾಯಕತ್ವದ ತರಬೇತಿ, ಬ್ಯಾಂಡೇಜುಗಳು, ದಿಕ್ಸೂಚಿ ಬಳಕೆ, ವನವಿದ್ಯಾ ಸಂಕೇತಗಳು, ಚಾರಣ, ಹೊರ ಸಂಚಾರ, ಇಂದ್ರಿಯ ಆಟಗಳು, ಟೆಂಟ್ ನಿರ್ಮಾಣ, ಗ್ರಾಮ ಸ್ವಚ್ಛತೆ, ಗ್ರಾಮದ ಶೌಚಾಲಯಗಳ ಬಗ್ಗೆ ಸಮೀಕ್ಷೆ ಮತ್ತು ಜಾಗೃತಿ ಹಾಗೂ ನೀರಿನ ಬಳಕೆ ಬಗ್ಗೆ ನಾಟಕ ಮತ್ತು ಹಾಡುಗಳ ಮೂಲಕ ಜಾಗೃತಿ ಮೂಡಿಸಲಾಯಿತು. ಸಮಾರೋಪ ಸಮಾರಂಭದಲ್ಲಿ ಡಾ॥ ರಮೇಶ್, ಜಿಲ್ಲಾ ಸಂಸ್ಥೆಯ ಸ್ಥಾನಿಕ ಆಯುಕ್ತರು ರವರು ಅಧ್ಯಕ್ಷತೆ ವಹಿಸಿ ಪ್ರಮಾಣ ಪತ್ರ ವಿತರಿಸಿದರು.

* ದಿನಾಂಕ 10-09-2015 ರಂದು ಜಿಲ್ಲಾ ರೋಟರಿ 3190 ಹಾಗೂ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆಯ ಸಂಯುಕ್ತಾಶ್ರಯದಲ್ಲಿ ನಾಯಕತ್ವದ ತರಬೇತಿಯನ್ನು ರೋವರ್ಸ್ - ರೇಂಜರ್ಸ್‌ಗಳಿಗೆ ಆಯೋಜಿಸಲಾಗಿತ್ತು. ಸಂಪನ್ಮೂಲ ವ್ಯಕ್ತಿಗಳಾಗಿ ಬೆಂಗಳೂರಿನ ಶ್ರೀ ವೆಂಕಟೇಶ್, ಜಿಲ್ಲಾ ಸಂಘಟಕ ಶ್ರೀ ವಿ. ಬಾಬು, ರೋಟರಿ ಅಧ್ಯಕ್ಷರಾದ ಶ್ರೀ ಕೆ. ಗೋಪಾಲರೆಡ್ಡಿ ರವರುಗಳು ಕಾರ್ಯನಿರ್ವಹಿಸಿದರು. ಎಲ್ಲಾ ಕಾಲೇಜುಗಳಿಂದ 48 ರೋವರ್ಸ್-ರೇಂಜರ್ಸ್ ಭಾಗವಹಿಸಿದ್ದರು.

ಉದ್ಘಾಟನಾ ಶಿಬಿರದಲ್ಲಿ ರೋಟರಿ ಸದಸ್ಯ ಶ್ರೀ ರಾಮಚಂದ್ರೇಗೌಡ, ಶ್ರೀ ಸೋಮಶೇಖರ್, ಶ್ರೀ ಬಹದ್ದೂರು, ಶ್ರೀ ಮಂಜುನಾಥ್ ರವರುಗಳು ಭಾಗವಹಿಸಿದ್ದರು.

* ದಿನಾಂಕ 22-08-2015 ರಂದು ಕೆ.ಜಿ.ಎಫ್ ಸ್ಥಳೀಯ ಸಂಸ್ಥೆಯ ರ್‍ಯಾಲಿಯನ್ನು ನಡೆಸಲಾಯಿತು. ರ್‍ಯಾಲಿಗೆ ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ವೆಂಕಟರಾಮರೆಡ್ಡಿ ರವರು ಚಾಲನೆ ನೀಡಿದರು. ಸಮಾರೋಪ ಸಮಾರಂಭದಲ್ಲಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ರವರು ಅಧ್ಯಕ್ಷತೆ ವಹಿಸಿದ್ದರು. ಸ್ಕೌಟ್ ಭವನದ ಆವರಣದಲ್ಲಿ ಸಸ್ಯಗಳನ್ನು ನೆಟ್ಟು ಸಮಾಜಕ್ಕೆ ಉತ್ತಮ ಪ್ರಜೆಗಳಾಗಿ ರೂಪುಗೊಳ್ಳಲು ಈ ಚಳುವಳಿಯು ಪೂರಕವಾಗಿದ್ದು ಸದುಪಯೋಗ ಪಡಿಸಿಕೊಳ್ಳಿರಿ ಎಂದು ತಿಳಿಸಿದರು. ರಾಜ್ಯದ ಉಪಾಧ್ಯಕ್ಷರಾದ ಶ್ರೀಮತಿ ಸರೋಜ ವಿ. ನಾಯ್ಡು ಹಾಗೂ ರಾಜ್ಯ ಜಂಟಿ ಕಾರ್ಯದರ್ಶಿ(ಗೈಡ್ಸ್) ಆದ ಶ್ರೀಮತಿ ಎಸ್.ಕೆ. ಪ್ರಭಾ, ಕೆ.ಜಿ.ಎಫ್, ನಗರಸಭೆಯ ಅಧ್ಯಕ್ಷರಾದ ಶ್ರೀ ಭಕ್ತವತ್ಸಲಂ, ಜಿಲ್ಲಾ ಕಾರ್ಯದರ್ಶಿ ಶ್ರೀ ಎಂ.ವಿ. ಜನಾರ್ಧನ್, ಜಿಲ್ಲಾ ಆಯುಕ್ತರಾದ ಶ್ರೀ ಚಾಂದ್ ಪಾಷಾ, ಜಿಲ್ಲಾ ಸಂಘಟಕ ಶ್ರೀ ವಿ. ಬಾಬು, ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ರಚನ್‌ದಾಸ್, ಸಹಕಾರ್ಯದರ್ಶಿ ಶ್ರೀಮತಿ ವೀನಸ್, ಎಡಿಸಿ., ಶ್ರೀ ಪ್ರಭುದೇವ್ ಎಡಿಸಿ, ಶ್ರೀ ನೇಸರ್, ಶಿಕ್ಷಕರು ಮತ್ತು 456 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

* ದಿನಾಂಕ 12-09-2015 ರಿಂದ 13-09-2015 ರ ವರೆಗೆ ಎಕ್ಸಲೆಂಟ್ ಶಾಲೆ ಕೆ.ಜಿ.ಎಫ್‌ನಲ್ಲಿ ದ್ವಿತೀಯ ಸೋಪಾನ್ ಪರೀಕ್ಷಾ ಶಿಬಿರ ನಡೆಸಲಾಯಿತು. ಈ ಶಿಬಿರದ ನಾಯಕರಾಗಿ ಶ್ರೀ ಸಂಪತ್ ಕುಮಾರ್, ನಾಯಕಿಯಾಗಿ ಶ್ರೀಮತಿ ವೀನಸ್ ರವರು ಕಾರ್ಯನಿರ್ವಹಿಸಿದರು. ಸಮಾರೋಪ ಸಮಾರಂಭಕ್ಕೆ ಯುವ ನಾಯಕಿ ಶ್ರೀಮತಿ ರೂಪಶ್ರೀ ಶಶಿಧರ್ ರವರು ಭಾಗವಹಿಸಿ 25 ಸಾವಿರ ಅನುದಾನ ನೀಡುವುದಾಗ ಘೋಷಿಸಿದರು.

* ದಿನಾಂಕ 15-10-2015 ರಂದು ಡಾ॥ ಎ.ಪಿ.ಜೆ. ಅಬ್ದುಲ್ ಕಲಾಂ ರವರ ಜನ್ಮ ದಿನಾಚರಣೆಯ ಸಲುವಾಗಿ ನಗರದ ಉದ್ಯಾನವನದಲ್ಲಿ ಸ್ವಚ್ಛ ಮಾಡಿ ಗಿಡನೆಟ್ಟು ಕಲಾಂ ರವರಿಗೆ ಗೌರವ ಸಲ್ಲಿಸಲಾಯಿತು. ಸಮಾರಂಭದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಜಗದೀಶ್, ಶಿಕ್ಷಕ ಸಂಘದ ಗೌರವಾಧ್ಯಕ್ಷರಾದ ಶ್ರೀ ಅಶ್ವಥ್‌ನಾರಾಯಣ, ಪದಾಧಿಕಾರಿಗಳಾದ ಶ್ರೀ ಮುನಿನಾರಾಯಣಪ್ಪ, ಶ್ರೀಮತಿ ಆಶಾರಾಣಿ, ಶ್ರೀ ಮಂಜುನಾಥ್, ಶ್ರೀ ವಿ. ಬಾಬು ಭಾಗವಹಿಸಿದ್ದರು.

* ಜಿಲ್ಲಾ ಕಾರ್ಯಕಾರಿ ಸಮಿತಿಯ ಸಭೆಯನ್ನು ಇತ್ತೀಚೆಗೆ ಒಕ್ಕಲಿಗರ ಭವನದಲ್ಲಿ ಹಮ್ಮಿಕೊಳ್ಳಲಾಗಿತ್ತು. ಕಾರ್ಯಕ್ರಮದಲ್ಲಿ ರಾಜ್ಯ ಪ್ರಶಸ್ತಿ ಪುರಸ್ಕೃತರಾದ ಶ್ರೀ ಇ. ಶ್ರೀನಿವಾಸಗೌಡ, ಕುರುಗಲ್ ಸರ್ಕಾರಿ ಪ್ರೌಢಶಾಲೆಯ ದೈಹಿಕ ಶಿಕ್ಷಣ ಶಿಕ್ಷಕರಾದ ಶ್ರೀ ಜಿ.ಎಂ. ಶ್ರೀನಿವಾಸ, ಮಾಲೂರು ತಾಲ್ಲೂಕಿನ ತೊರ್ನಹಳ್ಳಿ ಶಾಲೆಯ ಶಿಕ್ಷಕರಾದ ಶ್ರೀ ವೆಂಕಟೇಶರವರಿಗೆ ಜಿಲ್ಲಾ ಸಂಘದ ವತಿಯಿಂದ ಸನ್ಮಾನ ಮಾಡಲಾಯಿತು.

* ಭಾರತ್ ಸ್ಕೌಟ್ ಮತ್ತು ಗೈಡ್ಸ್ ಸಂಸ್ತೆಯ ಚಟುವಟಿಕೆಗಳು ಎಲ್ಲಾ ಹಂತದ ಮಕ್ಕಳಿಗೂ ಹಾಗೂ ಸಾರ್ವಜನಿಕರಿಗೆ ಸದುಪಯೋಗವಾಗುವ ರೀತಿಯಲ್ಲಿ ರೂಪುಗೊಂಡಿದ್ದು, ಇದನ್ನು ಸದ್ಬಳಿಕೆ ಮಾಡಿಕೊಂಡು ಉತ್ತಮ ಸಮಾಜ ಕಟ್ಟಲು ಪಣತೊಡಬೇಕಿದೆ ಎಂದು, ಗುಪ್ತಾಸ್ ಇಂಟರ್ ನ್ಯಾಷನಲ್ ಶಾಲೆಯ ಪ್ರಾಂಶುಪಾಲೆ ಜೂಲಿಯಟ್ ಹೇಮಲತ ಅಭಿಮತ ವ್ಯಕ್ತಪಡಿಸಿದರು.

ದಿನಾಂಕ : 07-11-2015ರಂದು ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಮತ್ತು ಗುಪ್ತಾಸ್ ಇಂಟರ್ ನ್ಯಾಷನಲ್ ಶಾಲೆಯ ಸಂಯುಕ್ತಾಶ್ರಯದಲ್ಲಿ ಏರ್ಪಡಿಸಿದ್ದ, ಪ್ರಸಕ್ತ ಸಾಲಿನ ಸ್ಕೌಟ್ - ಗೈಡ್ ಧ್ವಜ ದಿನಾಚರಣೆಯಲ್ಲಿ ಭಾಗವಹಿಸಿ, ಧ್ವಜಗಳನ್ನು ಬಿಡುಗಡೆ ಮಾಡಿ ಅವರು ಮಾತನಾಡುತ್ತಿದ್ದರು. ಮುಖ್ಯ ಅತಿಥಿಯಾಗಿದ್ದ ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಕೆ.ವಿ. ಶಂಕರಪ್ಪ ಅವರು ಮಾತನಾಡಿ ಸಂಸ್ಥೆಯ ಉದ್ದೇಶಿತ ಆಂದೋಲನ ಪ್ರತಿಯೊಂದು ಶಾಲಾ-ಕಾಲೇಜುಗಳಲ್ಲಿ ಹರಡುವಂತಾಗಿ ಬೆಳಗಿನ ದೀಪದಂತೆ ಪಸರಿಸಬೇಕೆಂದರು.

ಜಿಲ್ಲಾ ದೈಹಿಕ ಶಿಕ್ಷಣಾಧಿಕಾರಿ ಶ್ರೀ ಬಸವರಾಜ್ ಚಿಲಕಾಂತ್‌ಮಠ್ ಮಾತನಾಡಿ ಸಂಸ್ಥೆಯ ಕಾರ್ಯ-ಚಟುವಟಿಕೆಗಳಿಂದ ಸೇವಾ ಮನೋಭಾವ, ಶಿಸ್ತು, ಸಂಯಮ ಹಾಗೂ ಸ್ವಚ್ಛತೆ ಬೆಳೆಯುವುದರೊಂದಿಗೆ ಜೀವನದಲ್ಲಿ ನೈತಿಕ ಮೌಲ್ಯಗಳ ಅಳವಡಿಕೆಯಿಂದ ಸ್ವಸಾಮರ್ಥ್ಯ ಹೆಚ್ಚಾಗುತ್ತದೆ ಎಂದು ವಿವರಿಸಿದರು. ಸಂಸ್ಥೆಯ ಗೈಡ್ ಆಯುಕ್ತೆ, ಶ್ರೀಮತಿ ಕೆ.ಆರ್. ಜಯಶ್ರೀ ಮಾತನಾಡಿ ಸ್ಕೌಟ್-ಗೈಡ್‌ಗಳು ಶಾಲೆಯ ವಿದ್ಯಾಭ್ಯಾಸದೊಂದಿಗೆ ಸಂಸ್ಥೆಯಲ್ಲಿ ನಿರಂತರವಾಗಿ ತೊಡಗಿಸಿಕೊಳ್ಳುವುದರಿಂದ ಕಷ್ಟದಲ್ಲಿರುವವರಿಗೆ ನೆರವಾಗುವ, ಸಮಸ್ಯೆ ಬಂದಾಗ ಅದನ್ನು ಸುಲಭವಾಗಿ ಎದುರಿಸುವ ಗುಣ, ಸಮಾಜಸೇವೆ, ದೇಶಭಕ್ತಿ ಬೆಳೆಯುವಂತಾಗುತ್ತದೆ ಎಂದು ತಿಳಿಸಿದರು. ಸಂಸ್ಥೆಯ ಉಪಾಧ್ಯಕ್ಷ ಶ್ರೀ ಚಂದ್ರಶೇಖರ್ ಅವರು ಮಾತನಾಡಿ ಸ್ಕೌಟ್-ಗೈಡ್ ಸಂಸ್ಥೆಯು ಅಂತರಾಷ್ಟ್ರೀಯ ಮಟ್ಟದ ಸಂಸ್ಥೆಯಾಗಿದ್ದು ಪ್ರತಿಯೊಬ್ಬರಲ್ಲೂ ಭ್ರಾತೃತ್ವ, ಸ್ವಯಂಶಿಸ್ತು, ಮಾನವತ್ವ, ಸಮಾಜಸೇವೆ ಸೇರಿದಂತೆ ಲೋಕ ಕಲ್ಯಾಣದ ಧ್ಯೇಯೋದ್ದೇಶಗಳನ್ನು ಆದರ್ಶವಾಗಿಟ್ಟುಕೊಂಡಿದೆ ಎಂದು ವಿವರಿಸಿದರು.

## ಮಂಡ್ಯ

ದಿನಾಂಕ 1 ರಿಂದ 4 ಸೆಪ್ಟಂಬರ್ 2015 ರ ವರೆಗೆ ಶ್ರೀ ಕಾವೇರಿ ಬೋರೇದೇವರ ದೇವಸ್ಥಾನ, ಮಂಡ್ಯ ಕೊಪ್ಪಲು ಮಂಡ್ಯದಲ್ಲಿ ಮೈಸೂರು ಜಿಲ್ಲೆಯ ರೋವರ್ಸ್ ಮತ್ತು ರೇಂಜರ್ಸ್‌ಗಳ ನಿಪುಣ್ ತರಬೇತಿ ಮತ್ತು ಪರೀಕ್ಷಾ ಶಿಬಿರ ನಡೆಯಿತು. ಈ ಶಿಬಿರದಲ್ಲಿ 99 ರೇಂಜರ್ಸ್ ಮತ್ತು 85 ರೋವರ್ಸ್ ಭಾಗವಹಿಸಿದ್ದರು. ಶ್ರೀ ಅಶೋಕ ಕುಮಾರ್ ರವರು ರೋವರ್ಸ್ ವಿಭಾಗಕ್ಕೆ ಹಾಗೂ ಶ್ರೀಮತಿ ನಳಿನಿ ರೇಂಜರ್ ವಿಭಾಗಕ್ಕೆ ನಾಯಕರಾಗಿದ್ದರು.

ದಿನಾಂಕ 01-09-2015 ರಂದು ಶಿಬಿರದ ಉದ್ಘಾಟನಾ ಕಾರ್ಯಕ್ರಮ ನೆರವೇರಿತು. ಶಿಬಿರವನ್ನು ಉದ್ಘಾಟಿಸಿದ ಶ್ರೀಮತಿ ಜಯಂತಿ, ಅಧ್ಯಕ್ಷರು, ಗ್ರಾಮ ಪಂಚಾಯತಿ ಅರಕೆರೆರವರು ಶಿಬಿರದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ರೇಂಜರ್ಸ್ ಭಾಗವಹಿಸಿದ ಬಗ್ಗೆ ಹರ್ಷ ವ್ಯಕ್ತಪಡಿಸಿದರು.

ದಿನಾಂಕ 02-09-2015 ರಂದು ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಅಬ್ದುಲ್ ಜಮೀಲ್, ಡಾ.ಜೆ. ಕಮಲಾರಾಮನ್ ಉಪಾಧ್ಯಕ್ಷರು ಶ್ರೀಮತಿ ರಾಜಶ್ರೀ, ಡಿ.ಸಿ., (ಗೈ) ಶ್ರೀ ಆರ್.ಪಿ. ಚಂದ್ರು, ಕ್ಯೂ.ಎಂ. ಶ್ರೀ ಹೆಚ್. ಎನ್. ಉಮೇಶ್ ಶಿಬಿರಕ್ಕೆ ಭೇಟಿ ನೀಡಿದ್ದರು. ಸಂಜೆ ನಡೆದ ಶಿಬಿರಾಗ್ನಿ ಕಾರ್ಯಕ್ರಮಕ್ಕೆ ಶ್ರೀಮತಿ ಮನೋಹರ ಪ್ರಭ, ಡಿ.ಟಿ.ಸಿ., (ಗೈ) ಶ್ರೀ ಅಜಯ್ ಕುಮಾರ್ ಜೈನ್ ಹೆಚ್.ಕ್ಯೂ.ಸಿ., (ಎಸ್) ರವರು ಆಗಮಿಸಿದ್ದರು.

ದಿನಾಂಕ : 03-09-2015 ರಂದು ಬೆಳಿಗ್ಗೆ 11 ಗಂಟೆಗೆ ಸಮುದಾಯ ಅಭಿವೃದ್ಧಿ ಕಾರ್ಯಕ್ರಮದಲ್ಲಿ ಶ್ರೀ ಶಿವಲಿಂಗಯ್ಯ ನವರು ಸ್ಥಾನಿಕ ಆಯುಕ್ತರು (ಸ್ಕೌ) ರವರು ಮುಖ್ಯ ಅತಿಥಿಗಳಾಗಿದ್ದರು. ಶ್ರೀ ಎಚ್ಬಿಈಪನ್ ಸ್ಥಾನಿಕ ಆಯುಕ್ತರು(ಸ್ಕೌಟ್) ಅಧ್ಯಕ್ಷತೆ ವಹಿಸಿದ್ದರು. ಈ ಕಾರ್ಯಕ್ರಮದ ಅಂಗವಾಗಿ ಶ್ರೀ ಕಾವೇರಿ ಬೋರೇದೇವರ ದೇವಸ್ಥಾನದ ಸುತ್ತಲೂ ಗಿಡಗಳನ್ನು ಕತ್ತರಿಸಿ, ಕುಳಿತುಕೊಳ್ಳಲು ಕಲ್ಲಿನ ಬೆಂಚುಗಳನ್ನು ಕಟ್ಟಲಾಯಿತು. ದೇವಸ್ಥಾನದ ಆವರಣದಲ್ಲಿ ಸಸಿಗಳನ್ನು ನೆಡಲಾಯಿತು.

ಸಂಜೆ 4 ಗಂಟೆಗೆ ಮುಕ್ತಾಯ ಸಮಾರಂಭ ನೆರವೇರಿತು. ಶ್ರೀ ರೂಪರಾಜ್ ಚಂದನ್, ಜಂಟಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ ಮೈಸೂರು ರವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿ ಚಿಂತನಾ ಶಕ್ತಿಯುಳ್ಳ ತಾವುಗಳು ಎಲ್ಲಾ ವಿಷಯವನ್ನು ತಿಳಿದುಕೊಳ್ಳುವುದು ಮುಖ್ಯ ಎಲ್ಲರು ಚರ್ಚೆಗಳಲ್ಲಿ ಭಾಗವಹಿಸಬೇಕು ಎಂದು ತಿಳಿಸಿದರು. ಡಾ. ಕೆ.ಬಿ. ಗುರುಮೂರ್ತಿಯವರು ಯುವಜನತೆ ನಾಯಕತ್ವದ ಗುಣವನ್ನು ಮೈಗೂಡಿಸಿಕೊಳ್ಳಬೇಕು ಎಂದು ಸ್ಕೌಟ್-ಗೈಡ್‌ಗಳಿಗೆ ಕಿವಿಮಾತು ಹೇಳಿದರು.

ಡಾ. ಜೆ. ಕಮಲಾರಾಮನ್, ಉಪಾಧ್ಯಕ್ಷರು, ಸಭೆಯ ಅಧ್ಯಕ್ಷತೆ ವಹಿಸಿದ್ದರು. ಭವ್ಯ ಶಿಬಿರಾಗ್ನಿ ಕಾರ್ಯಕ್ರಮ ಸಂಜೆ 7 ಗಂಟೆಗೆ ನಡೆಯಿತು. ಶ್ರೀ ಪಿ.ಜಿ.ಅರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು ಕಾರ್ಯಕ್ರಮದ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಬದುಕಲು ಬೇಕಾದ ಜ್ಞಾನ ಸ್ಕೌಟಿಂಗ್ ತಿಳುವಳಿಕೆ ನೀಡುತ್ತದೆ. ಜೀವನ ಯಶಸ್ವಿಯಾಗಿ ನಡೆಸಬೇಕೆನ್ನುವ ಬಗ್ಗೆ ಚಿಂತಿಸಿ ಬದುಕನ್ನು ಕಟ್ಟಿಕೊಳ್ಳಬೇಕು. ಪ್ರಪಂಚವನ್ನು ಉಳಿಸಿಕೊಳ್ಳುವ ನಿಟ್ಟಿನಲ್ಲಿ ನಾವು ಬದುಕಬೇಕು ಎಂದರು. ಶ್ರೀ ಪಿ. ವಿಶ್ವನಾಥ್, ಡಿ.ಸಿ.ಸಿ., ಮೈಸೂರು ಜಿಲ್ಲೆರವರು ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದರು. ದಿನಾಂಕ 04-09-2015 ರಂದು ಬೆಳಿಗ್ಗೆ 7.30 ಗಂಟೆಗೆ ಸರ್ವಧರ್ಮ ಪ್ರಾರ್ಥನೆ ನೆರವೇರಿತು.

## ರಾಯಚೂರು

ಭಾರತ್ ಸ್ಕೌಟ್ಸ್-ಗೈಡ್ಸ್‌ನಿಂದ ಯುವ ಸಮುದಾಯದಲ್ಲಿ ಶಿಸ್ತು, ನಾಯಕತ್ವ ಗುಣ, ಸೃಜನಶೀಲತೆ ಬೆಳೆಸುತ್ತದೆ ಎಂದು ಜಿಲ್ಲಾ ಶಿಕ್ಷಣಾಧಿಕಾರಿ ಶ್ರೀಮತಿ ಆರ್. ಇಂದಿರಾ ಹೇಳಿದರು. ರಾಯಚೂರು ನಗರದ ವಿದ್ಯಾಭಾರತಿ ಶಿಕ್ಷಣ ಸಂಸ್ಥೆಯ ಸಭಾಂಗಣದಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಹಾಗೂ ಸ್ಥಳೀಯ ಸಂಸ್ಥೆ ಮತ್ತು ಶಿಕ್ಷಣ ಇಲಾಖೆಯ ಸಹಯೋಗದಲ್ಲಿ ನಡೆದ ದಿ. ಕೊಂಡಜ್ಜಿ ಬಸಪ್ಪನವರ ಜನ್ಮ ಶತಮಾನೋತ್ಸವ ಸ್ಮರಣಾರ್ಥವಾಗಿ ತಾಲೂಕ ಮಟ್ಟದ ಸ್ಕೌಟರ್-ಗೈಡರ್ಸ್ ಸಮಾವೇಶ ಮತ್ತು ಮುಖ್ಯೋಪಾಧ್ಯಾಯರುಗಳಿಗೆ ಸಿ.ಆರ್.ಪಿ., ಬಿ.ಆರ್.ಪಿ., ಹಾಗೂ ಶಿಕ್ಷಣ ಸಂಯೋಜಕರುಗಳಿಗೆ ಸ್ಕೌಟ್ಸ್-ಗೈಡ್ಸ್ ಚಳುವಳಿಗೆ ಸಂಬಂಧಿಸಿ ಒಂದು ದಿನದ ಸಾಮಾನ್ಯ ಮಾಹಿತಿ ಶಿಬಿರವನ್ನು ಉದ್ಘಾಟಿಸಿ ಅವರು ಮಾತನಾಡದಿರು.

ಕಾರ್ಯಕ್ರಮದ ಮುಖ್ಯ ಅತಿಥಿಗಳಾಗಿ ಶ್ರೀ ರಾಮಚಂದ್ರ ಶಿವಂಗಿ, ಕ್ಷೇತ್ರ ಶಿಕ್ಷಣಾಧಿಕಾರಿಗಳು, ರಾಯಚೂರು ಇವರು ಮಾತನಾಡಿ, ಸ್ಕೌಟ್ಸ್-ಗೈಡ್ಸ್ ಶಿಕ್ಷಣವು ಮಕ್ಕಳಲ್ಲಿ ಧೈರ್ಯ, ಸಾಹಸಮಯ ಚಟುವಟಿಕೆ, ಸೇವಾ ಮನೋಭಾವ, ನಾಯಕತ್ವದ ಗುಣ ಬೆಳೆಸುವಲ್ಲಿ ಉತ್ತಮ ಸಹಕಾರಿಯಾಗಿದೆ. ಇದನ್ನು ಪ್ರತಿ ಶಾಲೆಗಳಲ್ಲಿ ಘಟಕಗಳನ್ನು ಸ್ಥಾಪಿಸಿ ಮಕ್ಕಳಿಗೆ

ಮಾರ್ಗದರ್ಶನ ನೀಡಲು ಶಿಕ್ಷಕರಿಗೆ ತರಬೇತಿ ನೀಡುತ್ತಿರುವ ಜಿಲ್ಲಾ ಸಂಸ್ಥೆಯ ಕಾರ್ಯ ಶ್ಲಾಘನೀಯ ಎಂದರು. ಅಧ್ಯಕ್ಷತೆ ವಹಿಸಿದ್ದ ಶ್ರೀ ಎಸ್. ಗೋವಿಂದರಾಜು, ಅಧ್ಯಕ್ಷರು, ಸ್ಥಳೀಯ ಸಂಸ್ಥೆ ಇವರು ಮಾತನಾಡಿ, ಸ್ಕೌಟ್ಸ್-ಗೈಡ್ಸ್ ಇದು ಶಿಕ್ಷಣ ಇಲಾಖೆಯು ಅವಿಭಾಜ್ಯ ಅಂಗವಾಗಿ ಕಾರ್ಯನಿರ್ವಹಿಸಿ ವಿದ್ಯಾರ್ಥಿಗಳಲ್ಲಿ ಆತ್ಮಸ್ಥೈರ್ಯ ಹಾಗು ವಿವೇಚನಾ ಶಕ್ತಿ ಬೆಳೆಸಲು ಸಾಧ್ಯ ಎಂದರು. ಶ್ರೀ ಹೆಚ್. ಕೃಷ್ಣಮೂರ್ತಿ ಸ್ಕೌಟ್ಸ್-ಗೈಡ್ಸ್ ಸೇವೆಯನ್ನು ಶ್ಲಾಘಿಸಿ ಮಾತನಾಡಿದರು. ಈ ಸಂದರ್ಭದಲ್ಲಿ ಉತ್ತಮ ಸೇವೆ ಸಲ್ಲಿಸಿದ ಶ್ರೀ ದೇವಿಂದ್ರ ಕೆ, ಸ್ಕೌಟ್ ಮಾಸ್ಟರ್, ಇಡಪನೂರು, ಶ್ರೀ ಕುಮಾರ ಮಾನೆ, ಸ್ಕೌಟ್ ಮಾಸ್ಟರ್, ಶಕ್ತಿನಗರ, ಕುಮಾರಿ ಲಕ್ಷ್ಮೀದೇವಿ, ಗೈಡ್ ಕ್ಯಾಪ್ಟನ್, ಶ್ರಿಮತಿ ಶಿರಿನ್ ತಬಿತಾ, ಗೈಡ್ ಕ್ಯಾಪ್ಟನ್ ಶಕ್ತಿನಗರ, ಶ್ರೀ ವೆಂಕಟೇಶ, ರೋವರ್, ಸ್ಕೌಟ್ ಲೀಡರ್, ಶ್ರೀಮತಿ ಲಲಿತಾ ಬಸನಗೌಡ, ಮುಖ್ಯಗುರುಗಳು ಬಸವಶ್ರೀ ಶಾಲೆ ಇವರನ್ನು ಸ್ಥಳೀಯ ಸಂಸ್ಥೆಯಿಂದ ಸನ್ಮಾಯಿಸಲಾಯಿತು. ಶ್ರೀಮತಿ ಅಜೀಜಾ ಸುಲ್ತಾನ, ಜಿಲ್ಲಾ ಆಯುಕ್ತರು(ಗೈ) ಇವರು ಪ್ರಾಸ್ತಾವಿಕವಾಗಿ ಮಾತನಾಡಿದರು. ಶ್ರೀ ರಾವುತರಾವ್ ಬರೂರ, ಜಿಲ್ಲಾ ಸಂಘಟನಾ ಆಯುಕ್ತರು ಕಾರ್ಯಕ್ರಮ ನಿರೂಪಿಸಿದರು. ಶ್ರೀ ಆರ್.ಹೆಚ್. ಸಾಗರ್ ಕಾರ್ಯದರ್ಶಿಗಳು ಸ್ವಾಗತಿಸಿದರು. ಶ್ರೀಮತಿ ಕೆ. ಆಲಿಯಾ ಖಾನಂ, ಜಿಲ್ಲಾ ಸಹಾಯಕ ಆಯುಕ್ತರು ವಂದಿಸಿದರು. ಈ ಸಂದರ್ಭದಲ್ಲಿ ಶ್ರೀ ಹೆಚ್. ಹನುಮಂತಪ್ಪ, ಜಿಲ್ಲಾ ಕಾರ್ಯದರ್ಶಿಗಳು, ಶ್ರೀ ಅಮರೇಗೌಡ ಪಾಟೀಲ್, ಜಿಲ್ಲಾ ಆಯುಕ್ತರು(ಸ್ಕೌ) ಶ್ರೀ ವಿನೋದ್ ಕುಮಾರ, ಅಧ್ಯಕ್ಷರು, ತಾ.ಪ್ರಾ, ಶಾಲಾ ಶಿಕ್ಷಕರ ಸಂಘ, ರಾಯಚೂರು, ತಾಲೂಕಿನ ಎಲ್ಲಾ ಶಾಲೆಗಳ ಮುಖ್ಯ ಗುರುಗಳು, ಸಿ.ಆರ್.ಪಿ,ಬಿ.ಆರ್.ಪಿ. ಹಾಗೂ ಶಿಕ್ಷಣ ಸಂಯೋಜಕರುಗಳು ಭಾಗವಹಿಸಿದ್ದರು.

* ದಿನಾಂಕ 07-11-2015 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆಯ ಕಾರ್ಯಾಲಯದಲ್ಲಿ "ಸ್ಕೌಟ್ ಸಂಸ್ಥಾಪನಾ ದಿನಾಚರಣೆಯ ಧ್ವಜ ಸ್ಟಿಕ್ಕರ್ ಬಿಡುಗಡೆ ಹಾಗೂ ಸ್ಕೌಟ್ಸ್-ಗೈಡ್ಸ್ ಸಪ್ತಾಹ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. ಮುಖ್ಯ ಅತಿಥಿಗಳಾಗಿ ಪೂಜ್ಯ ಬಿ.ಕೆ. ಸ್ಮಿತಾ, ಅಕ್ಕ ಸಂಚಾಲಕರು ಬ್ರಹ್ಮಕುಮಾರಿ ವಿಶ್ವ ವಿದ್ಯಾಲಯ ರಾಯಚೂರು ಇವರು ಸ್ಕೌಟ್ ಧ್ವಜ ಸ್ಟಿಕ್ಕರ್‌ಗಳನ್ನು ಬಿಡುಗಡೆ ಮಾಡಿದರು. ಅವರು ಮಾತನಾಡಿ ಸ್ಕೌಟ್ಸ್-ಗೈಡ್ಸ್‌ಗಳು ಸ್ವಯಂ ಸೇವಕರಾಗಿ ಕೋಮುಸೌಹಾರ್ದತೆ, ದೇಶಾಭಿಮಾನ, ಶಿಸ್ತು, ಸಮಾನತೆಯನ್ನು ಸಮಾಜದಲ್ಲಿ ಮುಡುವಂತೆ ನಾವೆಲ್ಲರು ಚಿಂತನೆ ಮಾಡುವುದರ ಮೂಲಕ ಬಾಳೋಣ ಎಂದು ಹೇಳಿದರು.

ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀ ಕೆ. ತಿಮ್ಮಯ್ಯ, ಜಿಲ್ಲಾ ಮುಖ್ಯ ಆಯುಕ್ತರು ವಹಿಸಿ ಮಾತನಾಡಿದರು. ಈ ಸಂದರ್ಭದಲ್ಲಿ ಜಿಲ್ಲಾ ಪದಾಧಿಕಾರಿಗಳು ಭಾಗವಹಿಸಿದ್ದರು.

* ದಿನಾಂಕ 07-11-2015 ರಂದು ಸಿಂಧನೂರು ಸ್ಥಳೀಯ ಸಂಸ್ಥೆ ವತಿಯಿಂದ ಸ್ಕೌಟ್ ಸಂಸ್ಥಾಪನಾ ದಿನಾಚರಣೆಯ ಧ್ವಜ ಸ್ಟಿಕ್ಕರ್ ಬಿಡುಗಡೆ ಹಾಗು ಸ್ಕೌಟ್ಸ್-ಗೈಡ್ಸ್ ಸಪ್ತಾಹ ಅಂಗವಾಗಿ ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳಿಂದ ನಗರದಲ್ಲಿ ಸೈಕಲ್ ಜಾಥಾ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. ಧ್ವಜ ಚೀಟಿಯನ್ನು ತಹಶೀಲ್ದಾರ್ ಶ್ರೀ ಎಂ. ಗಂಗಪ್ಪ ಕಲ್ಲೂರು ಇವರು ಬಿಡುಗಡೆ ಮಾಡಿ ಮಾತನಾಡಿ, ಸ್ಕೌಟ್ಸ್-ಗೈಡ್ಸ್ ಚಳುವಳಿಯ ಇತಿಹಾಸ ಕೇಳಿದರೆ ಹೆಮ್ಮೆಯ ಭಾವ ಮೂಡುತ್ತದೆ. ಪ್ರಜೆಗಳಲ್ಲಿ ಶಿಸ್ತು ಮೂಡಿಸಲು ಬಾಲ್ಯದಿಂದಲೇ ಮಕ್ಕಳಿಗೆ ಸ್ಕೌಟ್ಸ್-ಗೈಡ್ಸ್ ಶಿಕ್ಷಣ ಕೊಡಬೇಕು. ಈ ಮೂಲಕ ಚಿಣ್ಣರಲ್ಲಿ ನಿಸರ್ಗ ಪ್ರೇಮವನ್ನು ತುಂಬಬಹುದು ಎಂದರು. ನಂತರ ಸೈಕಲ್ ಜಾಥಾವನ್ನು ನಗರ ಪೋಲೀಸ್ ಠಾಣೆಯ ಪಿ.ಎಸ್.ಐ, ಶ್ರೀ ದೀಪಕ್ ಭೂಸರೆಡ್ಡಿ ಇವರು ಹಸಿರು ನಿಶಾನೆ ತೋರಿಸಿ ಚಾಲನೆ ನೀಡಿದರು. ಈ ಸಂದರ್ಭದಲ್ಲಿ ಶ್ರೀ ಎಸ್. ಶರಣೇಗೌಡ ಅಧ್ಯಕ್ಷರು, ಭಾ.ಸ್ಕೌ ಮತ್ತು ಗೈ. ಸ್ಥಳೀಯ ಸಂಸ್ಥೆ, ಶ್ರೀ ರವಿ ಅಂತರವಳ್ಳಿ, ಕಾರ್ಯದರ್ಶಿಗಳು, ಶ್ರೀಮತಿ ಸೀಮಾ ಜೆ. ಎ.ಡಿ.ಸಿ.(ಗೈ) ಶ್ರೀ ಖಾದರ್ ಭಾಷಾ, ರೋವರ್ ಸ್ಕೌಟ್ ಲೀಡರ್, ಶ್ರೀ ವೆಂಕಟರಮಣ, ಶ್ರೀಮತಿ ಸಿದ್ಧೇಶ್ವರಿ ಹಾಗು ಸ್ಥಳೀಯ ಸಂಸ್ಥೆಯ ಎಲ್ಲ ಪದಾಧಿಕಾರಿಗಳು ಭಾಗವಹಿಸಿದ್ದರು.

* ದಿನಾಂಕ 07-11-2015 ರಂದು ದೇವದುರ್ಗ ಸ್ಥಳೀಯ ಸಂಸ್ಥೆಯ ವತಿಯಿಂದ ಸ್ಕೌಟ್ ಸಂಸ್ಥಾಪನಾ ದಿನಾಚರಣೆಯ ಧ್ವಜ ಸ್ಟಿಕ್ಕರ್ ಬಿಡುಗಡೆ ಹಾಗು ಸ್ಕೌಟ್ಸ್-ಗೈಡ್ಸ್ ಸಪ್ತಾಹ ಅಂಗವಾಗಿ ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳಿಂದ ನಗರದಲ್ಲಿ ಸೈಕಲ್ ಜಾಥಾ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. ಸೈಕಲ್ ಜಾಥಾವನ್ನು ದೇವದುರ್ಗ ಪುರಸಭೆಯ ಅಧ್ಯಕ್ಷ ಶ್ರೀ ಶ್ರೀನಿವಾಸ ಅಬಕಾರಿ ಇವರು ಹಸಿರು ನಿಶಾನೆ ತೋರಿಸಿ ಚಾಲನೆ ನೀಡಿದರು.

ನಗರದ ವಿವಿಧ ರಸ್ತೆಗಳಲ್ಲಿ ಜಾಥಾ ನಡೆಸಲಾಯಿತು. ನಂತರ ಡಾನ್ ಬಾಸ್ಕೋ ಶಾಲೆಯಲ್ಲಿ ಧ್ವಜ ಚೀಟಿಯನ್ನು ಶ್ರೀ ಲಿಂಗಪ್ಪ ತಾಲೂಕು ದೈಹಿಕ ಶಿಕ್ಷಣಾಧಿಕಾರಿಗಳು ದೇವದುರ್ಗ ಇವರು ಬಿಡುಗಡೆ ಮಾಡಿದರು. ಈ ಸಂದರ್ಭದಲ್ಲಿ ಶ್ರೀ ಮಲ್ಲಯ್ಯ, ತಾ. ಪ್ರಾ. ಶಾಲಾ ಶಿ. ಸಂಘ, ದೇವದುರ್ಗ, ಶ್ರೀ ದಂಡಪ್ಪ, ಉಪಾಧ್ಯಕ್ಷರು, ಶ್ರೀಮತಿ ಲತಾ ದೇವರು, ಉಪಾಧ್ಯಕ್ಷರು, ಭಾ. ಸ್ಕೌ ಮತ್ತು ಗೈ. ಸ್ಥಳೀಯ ಸಂಸ್ಥೆ, ಶ್ರೀ ಬಸವರಾಜ್ ಮಡಿವಾಳ, ಎ.ಡಿ.ಸಿ.(ಸ್ಕೌ), ಶ್ರಿ ದಾವಲ್ ಸಾಬ್ ಬಂಡಿ ಕಾರ್ಯದರ್ಶಿಗಳು, ಶ್ರೀ ಲಿಂಗರಾಜ ಹೈಯಾಳ ಖಜಾಂಚಿಗಳು, ಶ್ರೀ ಬಾಲಪ್ಪ ಅಧ್ಯಕ್ಷರು ತಾ.ದೈ.ಶಿ. ಸಂಘ. ಶ್ರೀಮತಿ ವನಜಾ ಎ.ಡಿ.ಸಿ.(ಗೈ), ಫಾದರ ಕೆ.ಸಿ., ಮ್ಯಾಥ್ಯೂ ಹಾಗು ವಿವಿಧ ಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

* ವಿದ್ಯಾರ್ಥಿ ಸಮೂಹದಲ್ಲಿ ಶಿಸ್ತು, ಸಂಯಮ ರೂಪಿಸಿ ಆದರ್ಶನಾಗರಿಕರನ್ನಾಗಿಸುವಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಬೆಳವಣಿಗೆಗೆ ನಿರಂತರ ಸಹಕರಿಸಲಾಗುವುದೆಂದು ವಿಧಾನ ಪರಿಷತ್ ಸದಸ್ಯ ಸನ್ಮಾನ್ಯ ಶ್ರೀ ಎನ್.ಎಸ್. ಬೋಸರಾಜು ಅಭಿಮತ ವ್ಯಕ್ತಪಡಿಸಿದರು.

ದಿನಾಂಕ 22-10-2015 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಯಚೂರು ಜಿಲ್ಲಾ ಸಂಸ್ಥೆಯ ಸ್ಕೌಟ್ ಭವನದಲ್ಲಿ ತಮ್ಮ ಅನುದಾನದಡಿ 5 ಲಕ್ಷ ರೂ ವೆಚ್ಚದಲ್ಲಿ ಬಿಡುಗಡೆಗೊಂಡ ನೂತನ ಕಾಂಪೌಂಡ್ ನಿರ್ಮಾಣ ಕಾಮಗಾರಿಗೆ ಭೂಮಿ ಪೂಜೆ ನೆರವೇರಿಸಿ ಅವರು ಮಾತನಾಡಿದರು. ಈ ಸಂದರ್ಭದಲ್ಲಿ ಶ್ರೀ ಕೆ. ತಿಮ್ಮಯ್ಯ ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ರುದ್ರಪ್ಪ ಅಂಗಡಿ ಸ್ಕೌಟ್ ಸದಸ್ಯರು ಶ್ರೀ ಜಿ. ಶಿವಮೂರ್ತಿ ಮಾಜಿ ನಗರಸಭೆ ಸದಸ್ಯರು, ಶ್ರೀ ಅಮರೇಗೌಡ ಪಾಟೀಲ್ ಜಿಲ್ಲಾ ಆಯುಕ್ತರು(ಸ್ಕೌ) ಶ್ರೀಮತಿ ಅಜೀಜಾ ಸುಲ್ತಾನ ಜಿಲ್ಲಾ ಆಯುಕ್ತರು(ಸ್ಕೌ) ಜಿಲ್ಲಾ ಕಾರ್ಯದರ್ಶಿ ಶ್ರೀ ಹೆಚ್. ಹನುಮಂತಪ್ಪ, ಜಿಲ್ಲಾ ಖಜಾಂಚಿ, ಹಾಗೂ ಜಿಲ್ಲಾ ಸಂಸ್ಥೆಯ ಎಲ್ಲ ಪದಾಧಿಕಾರಿಳಗಳು ಉಪಸ್ಥಿತರಿದ್ದರು.

* ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ರಾಯಚೂರು ಹಾಗೂ ಸ್ಥಳೀಯ ಸಂಸ್ಥೆ ಮಾನವಿ ವತಿಯಿಂದ ಹಮ್ಮಿಕೊಂಡಿದ್ದ ಕೊಂಡಜ್ಜಿ ಬಸಪ್ಪನವರ ಜನ್ಮ ಶತಾಬ್ದಿ ಅಂಗವಾಗಿ ದಿನಾಂಕ 09-11-2015 ರಂದು ಬೆಳಿಗ್ಗೆ 9.00 ಗಂಟೆಗೆ ಸ್ಕೌಟ್ಸ್-ಗೈಡ್ಸ್‌ಗಳಿಗಾಗಿ ಸೈಕಲ್ ಜಾಥಾ ಕಾರ್ಯಕ್ರಮವನ್ನು ತಹಸಿಲ್ದಾರರಾದ ಶ್ರೀ ಸಿದ್ಧಲಿಂಗಪ್ಪ ನಾಯಕ ಮತ್ತು ಮಾನ್ವಿ ಪಿ.ಎಸ್.ಐ. ಶ್ರೀ ಉಮೇಶ ಶಾಬೆ ಉದ್ಘಾಟಿಸಿದರು. ಸುಮಾರು 500 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ನಂತರ ಸ್ಕೌಟ್ಸ್-ಗೈಡ್ಸ್‌ಗಳಿಗಾಗಿ ರಸಪ್ರಶ್ನೆ ಮತ್ತು ಭಾಷಣ ಸ್ಪರ್ಧೆಗಳನ್ನು ಏರ್ಪಡಿಸಲಾಗಿತ್ತು. ಮಧ್ಯಾಹ್ನ, 3.00 ಗಟೆಗೆ ಕಾಕತೀಯ ಶಾಲೆ ಮಾನವಿಯಲ್ಲಿ ಮುಕ್ತಾಯ ಸಮಾರಂಭದ ಉದ್ಘಾಟಕರಾಗಿ ಶ್ರೀ ಹಂಪಯ್ಯ ನಾಯಕ ಮಾನವಿ ಕ್ಷೇತ್ರದ ಶಾಸಕರು ಆಗಮಿಸಿದ್ದರು. ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಬಿ. ಬಲರಾಮಕೃಷ್ಣ ರವರು ಅಧ್ಯಕ್ಷತೆ ವಹಿಸಿದ್ದರು. ಕೊನೆಯಲ್ಲಿ ಶ್ರೀ ಸಿ.ಎಂ. ನರಸಿಂಹ ವಂದಿಸಿದರು.

## ಶಿರಸಿ

ದಿನಾಂಕ 02-10-2015 ರಂದು ಗಾಂಧಿ ಜಯಂತಿ ಅಂಗವಾಗಿ ಸ್ವಚ್ಛತಾ ಕಾರ್ಯದಲ್ಲಿ ಸ್ಕೌಟ್ಸ್-ಗೈಡ್ಸ್ ತೊಡಗಿಸಿಕೊಂಡಿದ್ದರು. ಬನವಾಸಿಯಲ್ಲಿ ಸ್ಕೌಟ್ಸ್-ಗೈಡ್ಸ್ ಮತ್ತು ರೋವರ್ಸ್ ಶಾಲಾ ಮೈದಾನ ಹಾಗೂ ಜಯಂತಿ ಕ್ರೀಡಾಂಗಣವನ್ನು ಸ್ವಚ್ಛಗೊಳಿಸಿದರು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಶಿರಸಿ ಜಿಲ್ಲಾ ಸಂಸ್ಥೆಯ ಚಟುವಟಿಕೆ ಮತ್ತು ಕಾರ್ಯಕ್ರಮಗಳಿಗೆ ಪೂರಕ ಸನ್ನಿವೇಶವನ್ನು ಒದಗಿಸಲು ಪೂರ್ವಭಾವಿಯಾಗಿ ಇಲಾಖೆಯ ಅಧಿಕಾರಿಗಳು ಹಾಗೂ ಸಂಸ್ಥೆಯ ಪದಾಧಿಕಾರಿಗಳ ಸಭೆ ದಿನಾಂಕ 05-10-2015 ರಂದು ಲಾಯನ್ಸ್ ಪ್ರೌಢಶಾಲೆ ಶಿರಸಿಯಲ್ಲಿ ಸಂಜೆ ನಡೆಯಿತು. ರಾಜ್ಯ ಸಂಸ್ಥೆಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯರವರ ನೇತೃತ್ವದಲ್ಲಿ ಶಿರಸಿ ಉಪವಿಭಾಗದ ಸಹಾಯಕ ಆಯುಕ್ತರು ಮತ್ತು ಜಿಲ್ಲಾ ಸಂಸ್ಥೆಯ ಅಧ್ಯಕ್ಷರಾದ ಡಾ. ನಾಗೇಂದ್ರ ಹೊನ್ನಳ್ಳಿಯವರ ಸಭಾಧ್ಯಕ್ಷತೆಯಲ್ಲಿ ವಿವಿಧ ವಿಚಾರಗಳ ಕುರಿತು ಚರ್ಚಿಸಲಾಯಿತು. ರಾಜ್ಯ ಮುಖ್ಯ ಆಯುಕ್ತರು ಮಗುವಿನ ಸಾಮಾಜಿ, ನೈತಿಕ ವಿಕಾಸಕ್ಕೆ ಪೂರಕವಾದ ಕೌಶಲಗಳಿಂದ ಕೂಡಿದ ಸ್ಕೌಟ್ಸ್ ಮತ್ತು ಗೈಡ್ಸ್ ಚಟುವಟಿಕೆಗಳು ಜಿಲ್ಲೆಯಲ್ಲಿ ಎಲ್ಲಾ ಶಾಲೆಗಳಲ್ಲಿ ಆರಂಭವಾಗುವಂತಾಗಬೇಕು ಎಂದರು.

ಡಿಡಿಪಿಐ ಶ್ರೀ ಎಂ.ಎಸ್. ಪ್ರಸನ್ನಕುಮಾರ್ ತನ್ನ ಕಾರ್ಯವ್ಯಾಪ್ತಿಯಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಹಾಗೂ ಚಟುವಟಿಕೆಗಳು ಅನುಷ್ಠಾನಗೊಳಿಸುವುದಕ್ಕೆ ಅಗತ್ಯ ಸಹಕಾರ, ಸೂಕ್ತ ಆದೇಶಗಳನ್ನು ನೀಡುವುದಾಗಿ ತಿಳಿಸಿದರು. ಜಿಲ್ಲಾ ಸಂಸ್ಥೆ ಈ ಹಿಂದೆ ಸಂಘಟಿಸಿದ ಕಾರ್ಯಕ್ರಮದ ತುಣುಕುಗಳನ್ನು ವೀಕ್ಷಿಸಿದ ಗಣ್ಯರು ಪ್ರಸಂಶೆ ವ್ಯಕ್ತಪಡಿಸಿದರು. ಶ್ರೀ ಎಂ.ಎಸ್. ಪ್ರಸನ್ನಕುಮಾರ್, ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರು, ಶ್ರೀ ಬಸಪ್ಪ ಪೂಜಾರ್ ತಹಶೀಲ್ದಾರರು, ಶ್ರೀ ಬಿ.ವಿ. ನಾಯ್ಕ್, ಕ್ಷೇತ್ರ ಶಿಕ್ಷಣಾಧಿಕಾರಿಗಳು, ಶ್ರೀಮತಿ ಸೂರ್ ರಾಣಿ ಪ್ರಭು, ಉಪಾಧ್ಯಕ್ಷರು, ಶ್ರೀ ಎಂ.ಎಂ. ಭಟ್, ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ವಿ.ಎಚ್. ಭಟ್ಕಳ ಜಿಲ್ಲಾ ಆಯುಕ್ತರು, ಶ್ರೀಮತಿ ಜಾನಕಿ ವೇಣುಗೋಪಾಲ್ ಸಂಯೋಜನಾ ತಂಡದ ನಾಯಕಿ, ಶ್ರೀ ಶಂಕರ ನಾಗರಕಟ್ಟೆ, ಶ್ರೀ ದೀಪಕ ದೊಡ್ಡೂರು, ಶ್ರೀ ಎಂ.ಎಸ್. ಪಾಟೀಲ್, ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಮತ್ತು ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಗಳು ಉಪಸ್ಥಿತರಿದ್ದರು.

## ತುಮಕೂರು

ದಿನಾಂಕ 01-11-2015 ರಂದು ಜಿಲ್ಲಾ ಸಂಸ್ಥೆ ಕಚೇರಿಯಲ್ಲಿ ಕನ್ನಡ ರಾಜ್ಯೋತ್ಸವವನ್ನು ಆಚರಿಸಲಾಯಿತು. ಜಿಲ್ಲಾ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ಹಾಜರಿದ್ದು ಜಿಲ್ಲಾಡಳಿತ ನಡೆಸಿದ ಕನ್ನಡ ರಾಜ್ಯೋತ್ಸವ ಸಮಾರಂಭದ ಪಥಸಂಚಲನದಲ್ಲಿ 5 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

* ದಿನಾಂಕ 07-11-2015 ರಂದು ಜಿಲ್ಲಾ ಸಂಸ್ಥೆ ಕಚೇರಿಯ ಆವರಣದಲ್ಲಿ ಧ್ವಜ ಚೀಟಿ ಬಿಡುಗಡೆ ಮತ್ತು ಸ್ವಚ್ಛತಾ ಆಂದೋಲನ ಕುರಿತು ಸೈಕಲ್ ಜಾಥಾವನ್ನು ಹಮ್ಮಿಕೊಳ್ಳಲಾಯಿತು. ಈ ಸಮಾರಂಭಕ್ಕೆ ಮಹಾನಗರ ಪಾಲಿಕೆಯ ಪೂಜ್ಯ ಮಹಾಪೌರರಾದ ಶ್ರೀಮತಿ ಲಲಿತಾ ರವೀಶ್ ರವರು ಆಗಮಿಸಿ ಕಾರ್ಯಕ್ರಮ ನೆರವೇರಿಸಿದರು. ಈ ಕಾರ್ಯಕ್ರಮದಲ್ಲಿ 120 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ಜಿಲ್ಲಾ ಆಯುಕ್ತರಾದ ಶ್ರೀ ವೇಣು ಗೋಪಾಲಕೃಷ್ಣ, ಶ್ರೀಮತಿ ಸುಭಾಷಿಣಿ ರವೀಶ್, ಕಾರ್ಯದರ್ಶಿಗಳಾದ ಶ್ರೀ ಸುರೇಂದ್ರನಾಥ್ ಷಾ ಹಾಗೂ ಶ್ರೀ ಕರಿಸಿದ್ದಪ್ಪ ಡಿ.ಓ.ಸಿ., ಭಾಗವಹಿಸಿದ್ದರು.

## ಉಡುಪಿ

ದಿನಾಂಕ: 02-10-2015 ರಂದು ಗಾಂಧೀಜಿ ಮತ್ತು ಲಾಲ್ ಬಹಾದ್ದೂರ್ ಶಾಸ್ತ್ರಿ ಇವರ ಹುಟ್ಟುಹಬ್ಬದ ಪ್ರಯುಕ್ತ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಮತ್ತು ನಗರಸಭೆ ವತಿಯಿಂದ ಮಲ್ಪೆ ಗಾಂಧಿ ಪ್ರತಿಮೆಯ ಬಳಿ ಸರ್ವಧರ್ಮ ಪ್ರಾರ್ಥನೆ ಹಾಗೂ ಕಡಲತೀರ ಸ್ವಚ್ಛತಾ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಯಿತು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ಉಡುಪಿ, ನಗರಸಭೆ ಹಾಗೂ ಸ್ವಚ್ಛ ಭಾರತ್ ಫ್ರೆಂಡ್ಸ್ ಜಂಟಿಯಾಗಿ ಮಲ್ಪೆ ಕಡಲ ಕಿನಾರೆಯ ಪರಿಸರ ಸ್ವಚ್ಛತಾ ಅಭಿಯಾನ ನಡೆಸಿದರು. ಈ ಸಂದರ್ಭದಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಕಾರ್ಯದರ್ಶಿ ಶ್ರೀ ಕಲ್ಮಾಡಿ ಶೇಖರ್ ಪೂಜಾರಿ, ಕಬ್ ವಿಭಾಗ ಆಯುಕ್ತ ಶ್ರೀ ರಾಜಗೋಪಾಲ್ ಆಚಾರ್ಯ, ರೋವರ್ ವಿಭಾಗ ಆಯುಕ್ತ ಶ್ರೀ ದಯಾನಂದ ಶೆಟ್ಟಿ, ಜಿಲ್ಲಾ ಸಂಯೋಜಕ ನಿತಿನ್ ಅಮೀನ್, ಜಿಲ್ಲಾ ಸಂಘಟಕರು(ಗೈಡ್) ಸುಮನ ಸ್ವಚ್ಛ ಭಾರತ್ ಫ್ರೆಂಡ್ಸ್ ಸದಸ್ಯರಾದ ಶ್ರೀ ಗಣೇಶ್ ನಾಯಕ್, ಶ್ರೀ ರಾಘವೇಂದ್ರ ಪ್ರಭು ಕರ್ವಾಲು, ಶ್ರೀ ನಾಗರಾಜ್ ಭಂಡಾರ್ಕರ್ ಶ್ರೀಮತಿ ಸುಷ್ಮಾ ಮತ್ತಿತರು ಉಪಸ್ಥಿತರಿದ್ದರು. ವಿವಿಧ ಶಾಲಾ ಕಾಲೇಜಿನಿಂದ 75 ಸ್ಕೌಟ್ಸ್-ಗೈಡ್ಸ್, ರೋವರ್-ರೇಂಜರ್ಸ್‌ಗಳು ಭಾಗವಹಿಸಿದ್ದರು.

* ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಜಿಲ್ಲಾ ಸಂಸ್ಥೆ ಉಡುಪಿ ಹಾಗೂ ಸರಕಾರಿ ಪ್ರಥಮದರ್ಜೆ ಕಾಲೇಜು ಬೈಂದೂರು ಇದರ ಜಂಟಿ ಆಶ್ರಯದಲ್ಲಿ ಜಿಲ್ಲಾ ಮಟ್ಟದ ರೋವರ್ ರೇಂಜರ್‌ಗಳ ಚಾರಣ ಶಿಬಿರವು ದಿನಾಂಕ 25-09-2015 ಮತ್ತು 26-09-2015 ರ ವರೆಗೆ ಕೂಸಲ್ಲಿ ಜಲಪಾತ, ಆತ್ಯಾಡಿ ಬೈಂದೂರು ಇಲ್ಲಿ ಹಮ್ಮಿಕೊಳ್ಳಲಾಗಿತ್ತು.

ಸಮಾರಂಭವನ್ನು ಶ್ರೀ ಗೋಪಾಲ್ ಪೂಜಾರಿ ಉದ್ಘಾಟಿಸಿ, ಕಾರ್ಯಕ್ರಮಕ್ಕೆ ಶುಭ ಹಾರೈಸಿದರು. ರಾಜ್ಯ ಉಪಾಧ್ಯಕ್ಷರಾದ ಶ್ರೀಮತಿ ಶಾಂತ ವಿ. ಆಚಾರ್ಯ ತಮ್ಮ ಶಾಲಾ ಅವಧಿಯ ಶಿಬಿರದ ಅನುಭವ ಹಂಚಿಕೊಂಡರು. ಜಿಲ್ಲಾ

ಕಾರ್ಯದರ್ಶಿಗಳಾದ ಶ್ರೀ ಶೇಖರ್ ಪುಜಾರಿ, ಜಿಲ್ಲಾ ಸಂಘಟಕರಾದ ಶ್ರೀ ನಿತಿನ್ ಅಮಿನ್, ಜಿಲ್ಲಾ ತರಬೇತಿ ಆಯುಕ್ತರು(ಸ್ಕೌಟ್ಸ್) ಶ್ರೀ ಕೊಗ್ಗ ಗಾಣಿಗ, ಜಿಲ್ಲಾ ಸ್ಥಾನೀಯ ಆಯುಕ್ತರಾದ ಶ್ರೀ ಆನಂದ ಅಡಿಗ, ಜಿಲ್ಲಾ ಪಂಚಾಯತ್ ಸದಸ್ಯರಾದ ಶ್ರೀ ರಾಜು ದೇವಾಡಿಗ, ಪ್ರಾಂಶುಪಾಲರು, ಸರಕಾರಿ ಪ್ರಥಮದರ್ಜೆ ಕಾಲೇಜು, ಬೈಂದೂರು ಶಿಬಿರದ ನಾಯಕ ಶ್ರೀ ನಾಗೇಶ್ ಹಾಗೂ ಶ್ರೀ ಗುರುಪ್ರಸಾದ್ ಅವರು ಭಾಗವಹಿಸಿದ್ದರು.

ಚಾರಣ ಶಿಬಿರವನ್ನು ಸರಕಾರಿ ಪ್ರಥಮದರ್ಜೆ ಕಾಲೇಜು ಬೈಂದೂರು ಇಲ್ಲಿ ಆರಂಭಿಸಿ, ಆತ್ಯಾಡಿ ಹಿರಿಯ ಪ್ರಾಥಮಿಕ ಶಾಲೆ ಇಲ್ಲಿ ತಂಗಿ ಮಾರನೆಯ ದಿನ ಕೂಸಲ್ಲಿ ಜಲಪಾತದೆಡೆಗೆ ಸುಮಾರು 12 ಕಿ.ಮೀ. ಕಾಲ್ನಡಿಗೆಯಲ್ಲಿ ಸಾಗಲಾಯಿತು. ದಾರಿಯುದ್ದಕ್ಕೂ ಸ್ವಚ್ಛತಾ ಕಾರ್ಯಕ್ರಮವನ್ನು ಕೈಗೊಳ್ಳಲಾಯಿತು. ಜಿಲ್ಲೆಯಿಂದ ಸುಮಾರು 250 ರೋವರ್ ರೇಂಜರ್ ವಿದ್ಯಾರ್ಥಿಗಳು ಹಾಗೂ 15 ಜನ ರೋವರ್ ಸ್ಕೌಟ್ ಲೀಡರ್ ಹಾಗೂ ರೇಂಜರ್ ಲೀಡರ್ ಗಳು ಭಾಗವಹಿಸಿದ್ದರು.

* ಭಾರತ್ ಸ್ಕೌಟ್ ಮತ್ತು ಗೈಡ್ ಉಡುಪಿ ಜಿಲ್ಲಾ ಸಂಸ್ಥೆ ವತಿಯಿಂದ ಸ್ಕೌಟ್‌ಗಳಿಗೆ ಕೃಷಿಯ ಬಗ್ಗೆ ಮಾಹಿತಿ ಹಾಗೂ ಭತ್ತ ಕಟಾವು ಮಾಡುವ ಬಗ್ಗೆ ಅರಿವು ಮೂಡುವ ಕಾರ್ಯಕ್ರಮವನ್ನು ಕುದಿ ಗ್ರಾಮದಲ್ಲಿ ನಡೆಸಲಾಯಿತು. ರಾಷ್ಟ್ರ ಪ್ರಶಸ್ತಿ ಶಿಕ್ಷಕರಾದ ಶ್ರೀ ವಸಂತ್ ಶೆಟ್ಟಿ ಕುದಿ, ಇವರಮನೆಯ ಗದ್ದೆಯಲ್ಲಿ ಸುಮಾರು 25 ಸ್ಕೌಟ್‌ಗಳಿಗೆ ಭತ್ತದ ಕಟಾವು ಹಾಗೂ ಕೃಷಿಯ ಬಗ್ಗೆ ಅನೇಕ ಮಾಹಿತಿ ಮತ್ತು ಮಹತ್ವವನ್ನು ತಿಳಿಸಿದರು.

## ವಿಜಯಪುರ

ಇಂದು ವ್ಯಕ್ತಿಯ ವ್ಯಕ್ತಿತ್ವ ನಿರ್ಮಾಣ ವಿವಿಧ ಆಯಾಮಗಳ ಮೂಲಕ ಪರಿಪೂರ್ಣ ಮಾಡಲು ಸಾಕಷ್ಟು ಪ್ರಯತ್ನಗಳು ನಡೆದಿದ್ದರೂ ಕೂಡಾ ಸಾಧ್ಯವಾಗಿಲ್ಲವಾದರೂ ಅದನ್ನು ಸ್ಕೌಟ್ಸ್ ಮತ್ತು ಗೈಡ್ಸ್ ಚಳುವಳಿಯ ಮೂಲಕ ಸಾಧ್ಯವಿದ್ದು ಪ್ರತಿಯೊಂದು ಶಾಲಾ ಕಾಲೇಜುಗಳಲ್ಲಿ ಇದನ್ನು ಅಳವಡಿಸುವುದು ಅಗತ್ಯವಾಗಿದೆ ಎಂದು ಜಿಲ್ಲಾ ಸ್ಕೌಟ್ಸ್-ಗೈಡ್ಸ್ ಪ್ರಧಾನ ಆಯುಕ್ತರಾದ ಶ್ರೀ ಸಿದ್ದಣ್ಣ ಸಕ್ರಿ ಅವರು ಹೇಳಿದರು. ಅರಕೇರಿಯ ಶ್ರೀ ಅಮೋಘಸಿದ್ದೇಶ್ವರ ಗುಡ್ಡದಲ್ಲಿ ನಡೆದ ಸ್ಕೌಟ್ ಮಾಸ್ಟರ್ ಮತ್ತು ಗೈಡ್ ಕ್ಯಾಪ್ಟನ್ ರವರ ಮೂಲ ತರಬೇತಿಯ ಮುಕ್ತಾಯ ಸಮಾರಂಭದಲ್ಲಿ ಅವರು ಮಾತನಾಡುತ್ತಿದ್ದರು.

ಅಧ್ಯಕ್ಷತೆ ವಹಿಸಿದ್ದ ಜಿಲ್ಲಾ ಖಜಾಂಚಿ ಶ್ರೀ ಸಹಜಾನಂದ ದಂಧರಗಿ ಮಾತನಾಡಿ ಶತಮಾನದಿಂದ ನಡೆದು ಬರುತ್ತಿರುವ ಸ್ಕೌಟ್ಸ್ ಗೈಡ್ಸ್ ಇನ್ನುವರೆಗೂ ಪ್ರತಿ ಶಾಲೆಯಲ್ಲಿ ಕಾಣದಿರುವುದಕ್ಕೆ ವಿಷಾಧಿಸಿದ ಅವರು ಒಂದು ಜ್ಯೋತಿ ಮತ್ತೊಂದು ಜ್ಯೋತಿಯನ್ನು ಬೆಳಗುವಂತೆ ಒಬ್ಬ ಸ್ಕೌಟ್-ಗೈಡ್ ಮತ್ತೊಬ್ಬ ಸ್ಕೌಟ್-ಗೈಡ್‌ನನ್ನು ತಯಾರಿಸುವಂತಾಗಲಿ ಎಂದು ಅಶಿಸಿದರು. ಅತಿಥಿ ಸ್ಥಾನ ಅಲಂಕರಿಸಿದ ಜಿಲ್ಲಾ ಪ್ರಾಥಮಿಕ ಶಾಲಾ ಶಿಕ್ಷಕ ಸಂಘದ ಅಧ್ಯಕ್ಷ ಶ್ರೀ ಎಸ್.ಎಸ್. ಬೇನೂರ ಮಾತನಾಡಿ ಶಿಸ್ತು ಮತ್ತು ಸೇವೆಗೆ ಹೆಸರಾದ ಸ್ಕೌಟ್ ಗೈಡ್‌ನ ರಾಜ್ಯ ಜಾಂಬೋರೇಟ್‌ನಲ್ಲಿ ಪಾಲ್ಗೊಂಡ ತಮ್ಮ ಅನುಭವಗಳನ್ನು ಹಂಚಿಕೊಳ್ಳುತ್ತ ಎಲ್ಲ ಶಾಲಾ ಮಕ್ಕಳು ಇಂಥ ಚಳುವಳಿಯಲ್ಲಿ ತೊಡಗಿಸುವಂತೆ ಕರೆ ನೀಡಿದರು. ಕಾರ್ಯಕ್ರಮದ ಸಾನ್ನಿಧ್ಯ ವಹಿಸಿದ್ದ ಶ್ರೀ ಮಹಾದೇವ ಒಡೆಯರ ಆಶೀರ್ವಚನ ನೀಡಿದರು.

* ಸ್ವಾತಂತ್ರ್ಯ ಪೂರ್ವದಲ್ಲಿ ದೇಶದ ಮೂಲೆ ಮೂಲೆಯಲ್ಲಿ ತಲೆ ಎತ್ತಿದ್ದ ವಿವಿಧ ಸ್ಕೌಟ್ಸ್-ಗೈಡ್ಸ್ ಸಂಘಟನೆಗಳನ್ನು ಏಕೀಕೃತಗೊಳಿಸಿದ ದಿನವಾದ ನವೆಂಬರ್ 7ನ್ನು ಸ್ಕೌಟ್ಸ್-ಗೈಡ್ಸ್ ಸಂಸ್ಥಾಪನಾ ದಿನಾಚರಣೆಯಾಗಿ ಶ್ರೀ ಅಮೋಘಸಿದ್ದೇಶ್ವರ ಗುಡ್ಡದಲ್ಲಿ ಆಚರಿಸಲಾಯಿತು. ಧ್ವಜ ದಿನಾಚರಣೆ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದ ಜಿಲ್ಲಾ ಖಜಾಂಚಿ ಶ್ರೀ ಸಹಜಾನಂದ ದಂಧರಗಿ ಸ್ಕೌಟ್ಸ್-ಗೈಡ್ಸ್ ಧ್ವಜಗಳನ್ನು ಬಿಡುಗಡೆ ಮಾಡಿದರು. ನಂತರ ಮಾತನಾಡಿದ ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಸಿದ್ದಣ್ಣ ಸಕ್ರಿ, ರಾಷ್ಟ್ರೀಯ ಏಕತೆ ಮತ್ತು ಭಾವೈಖ್ಯತೆಯ ಹಿತದೃಷ್ಟಿಯಿಂದ ಅಂದಿನ ನಮ್ಮ ನೇತಾರರು ವಿವಿಧ ಹೆಸರಿನಲ್ಲಿ ಸಕ್ರೀಯವಾಗಿದ್ದ ಸ್ಕೌಟ್ಸ್-ಗೈಡ್ಸ್ ವಿವಿಧ ಸಂಘಟನೆಗಳನ್ನು ಒಂದುಗೂಡಿಸಿದ ದಿನ ನವೆಂಬರ್ 7ನ್ನು ಸ್ಕೌಟ್-ಗೈಡ್ ಸಂಸ್ಥಾಪನಾ ದಿನ ಹಾಗೂ ಧ್ವಜ ದಿನ ಎಂದು ಆಚರಿಸಲಾಗುತ್ತಿದ್ದು 1950 ನವೆಂಬರ್ 7 ರಂದು ಅಖಂಡ ಭಾರತಕ್ಕೆ ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥೆ ಜಾರಿಗೆ ಬಂದಿರುವ ವಿಷಯವನ್ನು ವಿವರಿಸಿದರು. ಈ ಬಗ್ಗೆ ಶ್ರೀ ಪರಶುರಾಮ ಕುಂಬಾರ ಅವರು ಉಪನ್ಯಾಸ ನೀಡಿ ಸಮಗ್ರ ಮಾಹಿತಿ ಒದಗಿಸಿದರು. ಕಾರ್ಯದರ್ಶಿ ಶ್ರೀ ಎಸ್.ಎಸ್. ಬೊಮ್ಮನಹಳ್ಳಿ ಅವರು ಪಾಲ್ಗೊಂಡ ಎಲ್ಲರಿಗೂ ಧ್ವಜ ನೀಡಿ ದೇಣಿಗೆ ಸಂಗ್ರಹಕ್ಕೆ ಚಾಲನೆ ನೀಡಿದರು.



ದಿ. ಕೊಂಡಜ್ಜಿ ಬಸಪ್ಪನವರ ಜನ್ಮಶತಮಾನೋತ್ಸವ ಸ್ಮರಣಾರ್ತ ಕೊಪ್ಪಳ ಜಿಲ್ಲೆಯ ಕನಕಗಿರಿಯ ಭಗ್‌ತ್‌ಸಿಂಗ್ ತಂಡದ ರೋವರ್ ಲೀಡರ್ ಮನೆ ಒಂದು ಗಿಡ ನಾಲ್ಕು ಸಸಿ ವಿತರಣಾ ಕಾರ್ಯಕ್ರಮದಲ್ಲಿ ಸಸಿಗಳನ್ನು ನೀಡುತ್ತಿರುವುದು.



ದಿನಾಂಕ 7.11.2015 ರಂದು ರಾಯಚೂರು ಸ್ಥಳೀಯ ಸಂಸ್ಥೆಯ ಆಶ್ರಯದಲ್ಲಿ ನಡೆದ ಸಂಸ್ಥಾಪನಾ ದಿನಾಚರಣೆಯ ಸಂದರ್ಭದಲ್ಲಿ ತಾಲ್ಲೂಕು ದೈಹಿಕ ಶಿಕ್ಷಣಾಧಿಕಾರಿಗಳಾದ ಶ್ರೀ ಲಿಂಗಪ್ಪ ಅವರು ಧ್ವಜ ಚೀಟಿಯನ್ನು ಬಿಡುಗಡೆಮಾಡುತ್ತಿರುವುದು.



ದಿನಾಂಕ 7.11.2015 ರಂದು ಕಲ್ಬುರ್ಗಿ ಜಿಲ್ಲಾ ಸಂಸ್ಥೆಯ ಆಶ್ರಯದಲ್ಲಿ ನಡೆದ ಸಂಸ್ಥಾಪನಾ ದಿನಾಚರಣೆಯ ಸಂದರ್ಭದಲ್ಲಿ ಶ್ರೀ ರಾಧಾ ಕೃಷ್ಣರಾವ್ ಮದನಕರ, ಅಪರ ಆಯುಕ್ತರು ಸಾರ್ವಜನಿಕ ಶಿಕ್ಷಣ ಇಲಾಖೆ, ಶ್ರೀಮತಿ ಆರತಿ ತಿವಾರಿ, ಮಹಾನಗರ ಪಾಲಿಕೆ ಸದಸ್ಯರು, ಶ್ರೀ ಶರಣಪ್ಪಾ ಕೋಬಾಳಕರ್, ಉಪ ನಿರ್ದೇಶಕರು, ಶ್ರೀ ಭರತರಾಜ ಸಾವಳಗಿ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಧ್ವಜ ಚೀಟಿಯನ್ನು ಬಿಡುಗಡೆಮಾಡುತ್ತಿರುವುದು.



ದಿ. ಕೊಂಡಜ್ಜಿ ಬಸಪ್ಪನವರ ಜನ್ಮಶತಮಾನೋತ್ಸವ ಕಾರ್ಯಕ್ರಮದಲ್ಲಿ ಯಾದಗಿರಿ ಜಿಲ್ಲೆಯ ಜಿಲ್ಲಾ ದೈಹಿಕ ಶಿಕ್ಷಣಾಧಿಕಾರಿಗಳಾದ ಶ್ರೀ ಶಂಕರ್ ಸೋನಾರ್, ಜಿಲ್ಲಾ ಗೈಡ್ ಆಯುಕ್ತರಾದ ಶ್ರೀಮತಿ ನಾಗರತ್ನ ಅನಪೂರ, ಜಿಲ್ಲಾ ಕಾರ್ಯದರ್ಶಿಗಳಾದ ಪಟ್ಟೇದಾರ್ ಹಾಗೂ ಇತರರು ಚಿತ್ರದಲ್ಲಿದ್ದಾರೆ



ದಿನಾಂಕ 7.11.2015 ರಂದು ತುಮಕೂರು ಜಿಲ್ಲಾ ಸಂಸ್ಥೆ ಆಶ್ರಯದಲ್ಲಿ ನಡೆದ ಸಂಸ್ಥಾಪನಾ ದಿನಾಚರಣೆಯ ಸಂದರ್ಭದಲ್ಲಿ ನಗರ ಪಾಲಿಕೆ ಮಹಾಪೌರರಾದ ಶ್ರೀಮತಿ ಲಲಿತಾ ರವೀಶ್ ಅವರು ಧ್ವಜ ಚೀಟಿಯನ್ನು ಬಿಡುಗಡೆಮಾಡುತ್ತಿರುವುದು.




ತುಮಕೂರು ಜಿಲ್ಲಾ ಸಂಸ್ಥೆಯ ವತಿಯಿಂದ ಆಯೋಜಿಸಿದ ಸೈಕಲ್ ಜಾಥಾದಲ್ಲಿ ಸ್ಕೌಟ್ಸ್‌ಗಳು ಭಾಗವಹಿಸಿರುವುದು. ಚಿತ್ರದಲ್ಲಿ ಸಂಸ್ಥೆಯ ಪದಾಧಿಕಾರಿಗಳು ಹಾಗೂ ಸ್ಕೌಟ್ಸ್-ಗೈಡ್ಸ್‌ಗಳನ್ನು ಕಾಣಬಹುದು.

Regd. as News Paper (Magazine) RNI No : 13348/1959. Postal Regd. No. KA/BGGPO/2580/2015-17
Posted at: PSO,RMS Bhavan, Mysore Road, Bengaluru-26 on 30-11-2015 (No. of Pages : 04+24 = 28)



ಬೆಂಗಳೂರಿನ ಹೆಚ್.ಎ.ಎಲ್. ರೋವರ್ ತಂಡದ ಸದಸ್ಯರು, ವಾರ್ಷಿಕ ಶಿಬಿರದ ಸಂದರ್ಭದಲ್ಲಿ ಉತ್ತರ ಪ್ರದೇಶದ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಅರವಿಂದ ಕುಮಾರ್ ಶ್ರೀವತ್ಸಾ ಅವರನ್ನು ಭೇಟಿಮಾಡಿರುವುದು



ಕನ್ನಡ ರಾಜ್ಯೋತ್ಸವ ಸಮಾರಂಭದಲ್ಲಿ ಬೀದರ್ ಜಿಲ್ಲೆಯ ಭಾಲ್ಕಿಯ ಅನುಗ್ರಹ ಆಂಗ್ಲ ಶಾಲೆಯ ಸ್ಕೌಟ್ಸ್ ಗೈಡ್ಸ್‌ಗಳಿಂದ ಪಿರಮಿಡ್ ರಚಿಸಿರುವುದು.



ದಿನಾಂಕ 08.08.2015ರಂದು ದಿ. ಕೊಂಡಜ್ಜಿ ಬಸಪ್ಪನವರ ಜನ್ಮ ಶತಮಾನೋತ್ಸವ ಅಂಗವಾಗಿ ರಾಯಚೂರು ಜಿಲ್ಲಾ ಸಂಸ್ಥೆಯ ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳಿಂದ ಸೈಕಲ್ ಜಾಥಾ.



ಕೊಂಡಜ್ಜಿ ತರಬೇತಿ ಶಿಬಿರದಲ್ಲಿ ಏರ್ಪಡಿಸಿದ್ದ ರಾಜ್ಯ ಮಟ್ಟದ ತರಬೇತಿ ಶಿಬಿರಗಳಲ್ಲಿ ಭಾಗವಹಿಸಿದ್ದ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು.



ಗಾಂಧಿ ಜಯಂತಿ ಅಂಗವಾಗಿ ಉಡುಪಿಯಲ್ಲಿ ಸ್ವಚ್ಛತಾ ಕಾರ್ಯಕ್ರಮದಲ್ಲಿ ತೊಡಗಿರುವ ಸ್ಕೌಟ್ಸ್‌ಗಳು.



ಮೈಸೂರಿನಲ್ಲಿ ಜರುಗಿದ ಮುಕ್ತದಳಗಳ ಮೇಳದ ರಂಗೋಲಿ ಸ್ಪರ್ಧೆಯಲ್ಲಿ ಭಾಗವಹಿಸಿರುವ ಗೈಡ್ಸ್‌ಗಳು.



ಆನೇಕಲ್‌ನಲ್ಲಿ ಜರುಗಿದ ದ್ವಿತೀಯ ಸೋಪಾನ ಪರೀಕ್ಷಾ ಶಿಬಿರದ ಚಟುವಟಿಕೆಗಳಲ್ಲಿ ಸ್ಕೌಟ್ಸ್-ಗೈಡ್ಸ್‌ಗಳು.





SCOUTS
Creating a Better World

**If not delivered, please return to :**
THE EDITOR, **Karnataka Scout & Guide**
State Headquarters, Shanthi Gruha
#39, Palace Road, Bengaluru - 560 001
Ph.: 080-22260017 e-mail.: shq@scout.org.in

**Published by : The Bharat Scouts & Guides, Karnataka, State Headquarters**
**Shanthi Gruha,** #39, Palace Road, Bengaluru - 560 001. **Publisher & Editor : Siddaiah,** IAS (Retd.)
**Printed by : L. Lingappa, M.D. at Sathyasri Printers Pvt. Ltd.,** 16/1, 3rd Cross, 2nd Main, Kasturiba Nagar, Mysore Road, Bengaluru-26